# ಕೊಡಗು  ಸಂಗಾತಿ

ಮಾರ್ಚ್ 15 ರಿಂದ 31, 2000 ಪಾಕ್ಷಿಕ ಪತ್ರಿಕೆ (ಸುಗ್ಗಿ 1 ರಿಂದ 15, 2000)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K. R. N. N. 240 ಸಂಪುಟ : 4 ಸಂಚಿಕೆ : 6 ಪುಟಗಳು : 24 ಬೆಲೆ ರೂ. : 6-00

ಲೇಖನ : ಒಳಪುಟಗಳಲ್ಲಿ

## 1990ರ ಗಣರಾಜ್ಯೋತ್ಸವದಲ್ಲಿ ಪ್ರಪ್ರಥಮಬಾರಿಗೆ
## ಸಿ.ಆರ್.ಪಿ.ಎಫ್. ಮಹಿಳಾ ಬೆಟಾಲಿಯನ್ ಭಾಗವಹಿಸಿದ ನೋಟ

## ಶುಭ ಹಾರೈಕೆ

ಇವು ಪೂಜಾರಿರ ಗಣಿ ಕುಶಾಲಪ್ಪ ಮತ್ತೆ ಪಾರ್ವತಿ ದಂಪತಿಗಳ ಮಕ್ಕ

**ಪ್ರೀತಿಯ ಕಣ್ಮಣಿಗಳಾದ ದೀಪಿಕಾ ಮತ್ತು ಮೋನಿಷ್**

ಆರೋಗ್ಯ, ಸುಖ, ವಿದ್ಯೆ, ಬುದ್ಧಿ, ಇದ್ದ್, ಸಂತೋಷದಿಂದ ಯಾಗೋಳು ನಗು ನಗುತ್ತಾ ಇರೋಕು. ನಿಮ್ಮ 10ನೇ ಮತ್ತು 9ನೇ ಹುಟ್ಟು ಹಬ್ಬಕ್ಕೆ ಆಶೀರ್ವಾದ ಮಾಡುವ

ಅಜ್ಜಿ : **ಪೂಜಾರಿರ ಬೆಳ್ಳಿವ್ವ,**
ಅಪ್ಪ : **ಪೂಜಾರಿರ ಗಣಿ ಕುಶಾಲಪ್ಪ,**
ಅವ್ವ : **ಪೂಜಾರಿರ ಪಾರ್ವತಿ ಕುಶಾಲಪ್ಪ. ಮಡಿಕೇರಿ**

18-3-91 ದೀಪಿಕಾ ಕುಶಾಲಪ್ಪ
18-3-92 ಮೋನಿಷ್‌ಕುಶಾಲಪ್ಪ

---

## 3ನೇ ವರ್ಷದ ಹುಟ್ಟು ಹಬ್ಬದ ಶುಭಾಶಯಗಳು

ಶುಭವನ್ನು ಕೋರುವ

ಅಜ್ಜಿ : **ಕುಯ್ಯಮುಡಿ ಚೋಂದಮ್ಮ,** ಅಜ್ಜಿ : **ನೆರಿಯನ ಪೊನ್ನಮ್ಮ,**
ಪಪ್ಪ : **ಕುಯ್ಯಮುಡಿ ಚಂದ್ರಶೇಖರ,** ಅಮ್ಮ : **ಕುಯ್ಯಮುಡಿ ಗೀತಾ,**
ದೊಡ್ಡಮ್ಮ : **ಕಾಳೆಯಂಡ ಜಾಜಿಬೋಪಯ್ಯ**

**11-3-97 ಕುಯ್ಯಮುಡಿ ನವೀನ್ ಚಂಗಪ್ಪ (ಸೋನು)**

---

## ಜೈನೀರ ಮತ್ತು ಬಂದು ಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರು

## ಪ್ರಕಟಣೆ

ದಿನಾಂಕ 1-09-1998ರಿಂದ ಜಾರಿಯಲ್ಲಿದ್ದ ಜೈನೀರ ಮತ್ತು ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರನ್ನು ದಿನಾಂಕ 1-03-2000 ದಿಂದ ಅನ್ವಯವಾಗುವಂತೆ "**ಗೌಡ ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರು**" ಎಂದು ಹೆಸರು ಬದಲಾಯಿಸಲಾಗಿದೆ.

ಸಂಘದ ಹಾಲಿ ಸನ್ಮಾನ್ಯ ಸದಸ್ಯರು ಮತ್ತು ಬಂಧು ಮಿತ್ರರು ಎಂದಿನಂತೆ ಸಹಕರಿಸಲು ವಿನಂತಿಸಿದೆ.

ಕಾರ್ಯದರ್ಶಿ : ಉಡುದೋಳಿರ ಸೋಮಪ್ಪ

---

## ತ್ವರೆ ಮಾಡಿರಿ

ನಮ್ಮ ಕವಿ ಮಂಡೆಕೋಲು ಗಂಗಾಧರ ಗೌಡ (ವಾಣಿ ಕುಮಾರ್) ರ ಇತ್ತೀಚೆಗಿನ ಕೃತಿ, 'ಸುಳ್ಯದ ಸಂಪಿಗೆ' ಬಿಡುಗಡೆಯಾಗಿ ಮಾರಾಟವಾಗುತ್ತಿದೆ. ಕೇವಲ ಕೆಲವೇ ಕೃತಿಗಳು ಲಭ್ಯ. ಕಾಡೂರ ಬಾಳು ಕಾದಂಬರಿ ಕೆಲವೇ ಮಾತ್ರ ಉಳಿದಿದೆ. ಕೂಡಲೇ ಪಡಕೊಳ್ಳಿರಿ.

ಪ್ರೇಮಾ ಸಾಹಿತ್ಯ ಪ್ರಕಾಶನ
ಉಬರಡ್ಕ ಮಿತ್ತೂರು, ಸುಳ್ಯ ತಾಲ್ಲೂಕು

 ಒಳನೋಟ

2000, ಮಾರ್ಚ್. 15-30 ರ ತನಕ





| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ**, 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
|  ಸಂಗಾತಿ ಚಿಹ್ನೆ ಮತ್ತು ಅರೆಭಾಷೆ ಕ್ಯಾಸೆಟ್ ಲಭ್ಯ | ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ **ಫೋನ್** : 08272/29620 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 **ಫೋನ್** : 08276/73370 |
|  ಬೆಂಗಳೂರು ಮಹಾನಗರ | ಅಮ್ಮಾಜೀರ ಪೊನ್ನಪ್ಪ, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, **ಫೋನ್** :080/6342822 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,**ಫೋನ್** : 080/6500946 |

 **ಚಂದಾ ವಿವರ** : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -**75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಪುಸ್ತಕ ಭಂಡಾರದ ಅವಶ್ಯಕತೆ

ಕೊಡಗಿನಲ್ಲಿ ಶಾಲಾ ಕಾಲೇಜುಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದ ಹಿಡಿದು ಸಾರ್ವಜನಿಕರು ಗ್ರಂಥಾಲಯಗಳಿಗೆ ಹೋಗುವ ಅಭ್ಯಾಸ ಬಹಳ ವಿರಳವೆನ್ನಬಹುದು ಕೊಡಗಿನಲ್ಲಿ ಗ್ರಂಥಾಲಯಗಳು ಬಹಳ ಕಡಿಮೆ.

ಜಿಲ್ಲಾ ಮಟ್ಟದ ಗ್ರಂಥಾಲಯಗಳನ್ನು ಬಿಟ್ಟರೆ ತಾಲ್ಲೂಕು ಕೇಂದ್ರಗಳು ಹಾಗೂ ಪಟ್ಟಣಗಳಲ್ಲಿ ಗ್ರಂಥಾಲಯಗಳೇ ಇಲ್ಲ. ಸರ್ಕಾರಿ ಗ್ರಂಥಾಲಯಗಳನ್ನು ಬಿಟ್ಟರೆ ಸಾರ್ವಜನಿಕವಾಗಿ ಖಾಸಗಿ ಗ್ರಂಥಾಲಯಗಳೇ ಇಲ್ಲ. ನಮ್ಮ ಯುವಕ ಯುವತಿಯರಿಗೆ ಶಾಲಾ ಕಾಲೇಜುಗಳ ಪಾಠಗಳ ಸಲುವಾಗಿ ಗ್ರಂಥಾಲಯಗಳಿವೆಯೇ ಹೊರತು ಸಾಮಾನ್ಯ ಜ್ಞಾನವನ್ನು ಪಡೆಯುವ ಗ್ರಂಥಗಳು ಬಹಳ ಕಡಿಮೆ ಯಾ ಇಲ್ಲವೆಂದೇ ಹೇಳಬಹುದು. ಕರ್ನಾಟಕದಲ್ಲಿ ಮಂಗಳೂರು, ಮೈಸೂರು, ಬೆಂಗಳೂರು, ಧಾರವಾಡ, ಗುಲ್ಬರ್ಗ, ಶಿವಮೊಗ್ಗೆಯಲ್ಲಿ ವಿಶ್ವವಿದ್ಯಾನಿಲಯಗಳು ಹಲವಾರು ರೀತಿಯ ಪುಸ್ತಕಗಳನ್ನು ಬಿಡುಗಡೆ ಮಾಡುತ್ತಿವೆ. ಇವುಗಳನ್ನು ಓದಬೇಕಾದರೆ ಆ ಸ್ಥಳಕ್ಕೆ ಹೋಗಿ ಅಲ್ಲಿ ಕೆಲವು ದಿನಗಳಿದ್ದು ಓದಬೇಕಾಗುತ್ತದೆ, ಅದರ ಬದಲು ರಾಜ್ಯ ಸರ್ಕಾರ ಯಾ ಖಾಸಗೀ ಸಂಸ್ಥೆಗಳು ಈ ದಿಶೆಯಲ್ಲಿ ಮುಂದೆ ಬಂದು ಮುಂದಿನ ಪೀಳಿಗೆಗಳ ಜ್ಞಾನ ಭಂಡಾರವನ್ನು ಹೆಚ್ಚಿಸಲು ಸಹಾಯಕರಾಗ ಬೇಕು. ಈ ರೀತಿಯ ನ್ಯೂನತೆಗಳಿರುವುದರಿಂದಲೇ ಗ್ರಾಮಗಳ ಮತ್ತು ಚಿಕ್ಕ ಪಟ್ಟಣಗಳ ಮಕ್ಕಳಿಗೆ ದೊಡ್ಡ ನಗರಗಳ ಮಕ್ಕಳೊಡನೆ ಸ್ಪರ್ಧೆ ನಡೆಸಲು ಸಾಧ್ಯವಾಗದೇ ಹೋಗುತ್ತದೆ, ಈ ನಿಟ್ಟಿನಲ್ಲಿ ಸರ್ಕಾರವೂ ಗ್ರಾಮ್ಯ ಜನರನ್ನು ನಿರ್ಲಕ್ಷ್ಯೆ ಮಾಡುತ್ತಿದೆ.

ಮಡಿಕೇರಿಯ ಜಿಲ್ಲಾ ಕೇಂದ್ರದ ಗ್ರಂಥಾಲಯವನ್ನು ಬೆಂಗಳೂರು ಮೈಸೂರು ಮುಂತಾದ ನಗರಗಳ ಬಡಾವಣೆ ಯಾ ವಲಯಗಳ ಗ್ರಂಥಾಲಯಗಳನ್ನು ಹೋಲಿಸಿದರೆ ಏನೇನೂ ಇಲ್ಲ ವೆನ್ನಬಹುದು ಇದಕ್ಕೆ ಕೊಡಗಿನಲ್ಲಿರುವ ದೊಡ್ಡ ದೊಡ್ಡ ಕಾಫಿ ಪ್ಲಾಂಟರುಗಳು, ವ್ಯಾಪಾರಿಗಳು, ಹಾಗೂ ಕಾರ್ಖಾನೆಯ ಮಾಲೀಕರು, ಕೊಡಗಿನಿಂದ ಹೊರದೇಶಗಳಿಗೆ ಹೋಗಿರುವವರೂ ಸೇರಿದರೆ ಈ ಕೆಲಸ ಕಷ್ಟಕರವಾದರು, ಸಾಧ್ಯವಾಗಲಾರದೆಂದೇನು ಅಲ್ಲ

ಅಂತೆಯೇ ಗೌಡ ಯುವ ಪೀಳಿಗೆಯ ದೃಷ್ಟಿಯನ್ನಿಟ್ಟು ಕೊಂಡು ಆಯಾಯ ಗೌಡ ಸಮಾಜಗಳು ಎಲ್ಲೆಲ್ಲಿ ತಲೆ ಎತ್ತಿ ನಿಂತಿದೆಯೋ ಅಲ್ಲೆಲ್ಲಾ ಸಾಧ್ಯವಾಗುವಷ್ಟು ಜನಾಂಗಕ್ಕೆ ಉಪಯೋಗವಿರುವ ಪುಸ್ತಕ ಗ್ರಂಥಗಳ ಲಭ್ಯವಿರುವಂತೆ ಮಾಡಿದರೆ ಕನಿಷ್ಠ ಗೌಡ ಜನಾಂಗದವರನ್ನು ಪ್ರೋತ್ಸಾಹಿಸಿ ದಂತಾಗುತ್ತದೆ. ಮಡಿಕೇರಿಯಲ್ಲಿರುವ ಕೊಡಗು ಗೌಡ ವಿದ್ಯಾರ್ಥಿ ಸಂಘ 1908ನೇ ಇಸವಿಯಲ್ಲಿ ಸ್ಥಾಪಿತವಾದರೂ ಇನ್ನೇನು ಶತಮಾನವನ್ನು ಆಚರಿಸುವ ದಿನಗಳು ಹತ್ತಿರ ಬಂದರೂ ಸ್ಥ ಪುಸ್ತಕ ಭಂಡಾರವನ್ನು ಇನ್ನು ಸಹ ಹುಟ್ಟು ಹಾಕದಿರುವುದು ಖೇದಕರ ಸಂಗತಿ. ಅಲ್ಲಿರುವ ಹಿಂದಿನ ಕಾಲದ ಮುಖ್ಯ ದಾಖಲೆಗಳು ಉಪಚಾರವಿಲ್ಲದೆ ಕಪಾಟಿನೊಳಗೆ ಧೂಳು ತುಂಬಿ ಬಿದ್ದಿರುವುದು ಇನ್ನು ಮುಂದಾದರು ನಿಲ್ಲಲಿ. ಈ ನಿಟ್ಟಿನಲ್ಲಿ ಕೊಡಗು ಗೌಡ ವಿದ್ಯಾ ಸಂಘ ಎಚ್ಚೆತ್ತು ರಕ್ಷಿಸಿ ಮುನ್ನೆಡದರೆ ಮುಂಬರುವ ಯುವ ಪೀಳಿಗೆಯ ಸಲುವಾಗಿ ಅಮೂಲ್ಯವಾದ ಗ್ರಂಥಾಲಯವನ್ನು ಬಿಟ್ಟು ಹೋಗಿರುವ ಕೀರ್ತಿ ವಿದ್ಯಾಸಂಘಕ್ಕೆ ಸಲ್ಲುವುದೆಂದು ಸಂಗಾತಿಯ ಅನಿಸಿಕೆ. ನೀವೇನನ್ನುತ್ತೀರಿ?

❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖

## ನಗೆ ಹನಿಗಳು

ಒಂದು ಕಾನ್ವೆಂಟ್ ಸ್ಕೂಲಿನ ಅದ್ಯಾಪಕಿ ತನ್ನ ಕ್ಲಾಸಿನಲ್ಲಿ ಒಂದು ಅಂಕಗಣಿತದ ಲೆಕ್ಕ ಬಿಡಿಸಲು ಹೇಳಿದರು, ಆ ಲೆಕ್ಕ ಹೀಗಿತ್ತು : 'ನಿಮ್ಮ ಟೇಬಲ್ ಮೇಲೆ ಏಳು ನೊಣಗಳಿವೆ; 'ನೀವು ಒಂದನ್ನು ಕೊಂದರೆ ಎಷ್ಟು ಉಳಿಯುತ್ತವೆ"?

ಒಬ್ಬಳು ಚೂಟಿಯಾದ ಹುಡುಗಿ ಉತ್ತರಿಸಿದಳು
ಸತ್ತ ಒಂದು ನೊಣ.

❖ ❖ ❖

ಉಪಾಧ್ಯಾಯ : (ಹೊತ್ತಾಗಿ ಶಾಲೆಗೆ ಹಾಜರಾದ ವಿದ್ಯಾರ್ಥಿಯನ್ನು ಕುರಿತು) ಶಾಲೆಗೆ ಬರಲು ಇಷ್ಟು ತಡವೇನು?

ವಿದ್ಯಾರ್ಥಿ (ಮೆಲ್ಲನೆ) : ದಾರಿಯಲ್ಲಿ ಒಂದು ಸೈನ್ ಬೋರ್ಡ್ ಕಂಡೆ ಸಾರ್.

ಉಪಾಧ್ಯಾಯ (ಗಂಭೀರ ಧ್ವನಿಯಲ್ಲಿ) : ಏನಿತ್ತದರಲ್ಲಿ

ವಿದ್ಯಾರ್ಥಿ : ಹತ್ತಿರದಲ್ಲಿ ಶಾಲೆಯಿದೆ, ನಿಧಾನವಾಗಿ ಹೋಗಿ. ಎಂದು ಸಾರ್....

ಹುಲಿಮನೆ ರಮೇಶ, ಮೈಸೂರು.

## ಗ್ರಾಮಪಂಚಾಯಿತಿ ಸದಸ್ಯರಿಗೆ ಸಂಗಾತಿ ನಮನಗಳು

1) ಮಡಿಕೇರಿ ತಾಲೂಕು ಕುಂಬಳದಾಳು ಗ್ರಾಮ ಪಂಚಾಯ್ತಿಗೆ ಫೆ|| 27ರಂದು ನಡೆದ ಚುನಾವಣೆಯಲ್ಲಿ ಕುಲ್ಲಚನ ದಿನೇಶ್‌ನವರು ಆಯ್ಕೆ ಆಗಿದ್ದಾರೆ, ಕರ್ಣಯ್ಯನ ಧನು ಸಭಿತ, ಚನ್ಯೆ.

2) ಮಡೆ ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಅವಂದೂರಿನಿಂದ ಪಟ್ಟಡ ಉಲ್ಲಾಸನವರು ಆಯ್ಕೆ ಆಗಿದ್ದಾರೆ. ಇವರ ತೋಟದಲ್ಲಿಯೆ ಕಾರ್ಮಿಕಳಾಗಿ ದುಡಿಯುತ್ತಿರುವ ಬಿಲ್ಲವರ ಜೆ. ಪೂರ್ಣಿಮಾ ಸಹ ಮಾಲಿಕರ ಜೊತೆಯಲ್ಲಿಯೇ ಗೆದ್ದಿರುವುದು ಬಹುಷ ಇದು ಅರೂಪದ ಸಂಗತಿ ಸಂಗಾತಿಗಾಗಿದೆ.

— ದೇವಾಯಿರ ದಾಮೋದರ.

ವಸಂತ ಋತುವಿನಲ್ಲಿ ಭೂಮಿ ತಾಯಿಯು ಋತುಮತಿಯಾಗುವಳು — ಪಟ್ಟಡ ಪ್ರಭಾಕರ್

# ಚೆಟ್ಟಿಮಾನಿಯಲ್ಲಿ ಅರೆಭಾಷೆಗೌಡರ ಕ್ರಿಕೆಟ್ ಆಟ : ಮುದನೀಡಿದ ಪಂದ್ಯಾಟ

ಕೊಡ್‌ಗ್ ಗೌಡ ಸಾಂಸ್ಕೃತಿಕ ಅಕಾಡೆಮಿ ಮತ್ತೆ ಕೆದಂಬಾಡಿ ಯುವಕ ಸಂಘ ಚೆಟ್ಟಿಮಾನಿ ಇವ್ರ ಜಂಟಿ ಆಶ್ರಯಲಿ ಕೊಡ್‌ಗ್ ಗೌಡ ಜನಾಂಗಕ್ಕಾಗಿ ಮಾರ್ಚ್ 3 ರ್‌ಂದ 5 ರವರ್‍ಗೆ ಚೆಟ್ಟಿಮಾನಿ ಕೆದಂಬಾಡಿ ಗ್ರೌಂಡ್ ಮತ್ತೆ ಸ್ಕೂಲ್ ಗ್ರೌಂಡ್‌ಲಿ ಏರ್ಪಾಡ್ ಮಾಡ್ದ ಜಿಲ್ಲಾ ಮಟ್ಟದ ಟೆನ್ನಿಸ್ ಬಾಲ್ ಕ್ರಿಕೆಟ್ ಆಟಲಿ ಒಟ್ಟು 40 ಗ್ರಾಮಾವಾರ್ ಗ್ರಾಮಗಳ್‌ಂದ ಬಂದ್ ಆಡಿದ್ದೊ. ಫೈನಲ್ ಪಂದ್ಯಲಿ "ಸತೀಶ್ ಫ್ರೆಂಡ್ಸ್ ಚೇರಂಗಾಲ" ತಂಡ, ಅರ್‍ವತ್ತೊಕ್ಲುನ" ಪೆರಾತ ಬಿ" ತಂಡನ 18 ರನ್ನ್‌ಗಳ್‌ಂದ ಸೋಲಿಸಿ, ಕುಂಜಿಲನ ಸತೀಶ್, ಪಿ.ಡಬ್ಲೂಡಿ. ಕಂಟ್ರಾಕ್ಟರ್ ಮಡಿಕೇರಿ ಇವ್ ಕೊಟ್ಟಂತ ಟ್ರೋಫಿನ ಗೆದ್ದ್‌ಕಂಡೊ. ಅಲ್ಲದೆ ಕೆದಂಬಾಡಿ ಆರ್. ರಾಜು ಇಂಜಿನೀಯರ್ ಚೆಟ್ಟಿಮಾನಿ ಇವ್ ಕೊಟ್ಟಂತ 3000/- ರೂಪಾಯಿಗಳ್ನ ಸಹ ಪಡಂಕಂಡೊ.

ಎರಡ್ನೆ ಬಹುಮಾನನ ಅರ್‍ವತ್ತೊಕ್ಲುನ "ಪೆರಾತ ಬಿ ತಂಡ" ಕೊಡ್‌ಗ್ ಸಂಗಾತಿ ಗೌರವ ಸಂಪಾದಕರ್ ಆದ ಪಟ್ಟಡ ಪ್ರಭಾಕರ್ ನವ್ ನೀಡ್ದ ಟ್ರೋಫಿ ಮತ್ತೆ ಕುಂದಚೇರಿ ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ಪೊನ್ನಟಿ ಶಾಂತಿ ಪೊನ್ನಪ್ಪನವ್ ಕೊಟ್ಟಂತ 2000/- ರೂಪಾಯಿಗಳ್ನ ಪಡ್‌ಕಂಡೊ. ಅಲ್ಲದೆ ಮಾಜಿ ಶಾಸಕ ದಂಬೆಕೋಡಿ ಮಾದಪ್ಪ, ಕೊಡ್‌ಗ್ ಗೌಡ ವಿದ್ಯಾಸಂಘದ ಅಧ್ಯಕ್ಷ ಕುಯ್ಯಮುಡಿ ಪೂರ್ಣಯ್ಯ, ಕೊಡ್‌ಗ್ ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷ ತಡಿಯಪ್ಪನ ಕುಮಾರ್ ಜಯ, ಬೆಂಗಳೂರ್‌ನ ಕಾವೇರಿ ನಾಡ್ ವಿದ್ಯಾಸಂಸ್ಥೆಯ ಸ್ಥಾಪಕ ಅಮ್ಮಾಜೀರ ಪೊನ್ನಪ್ಪ, ಇಂಡೇನ್ ಆಯಿಲ್, ಇಂಡೇನ್ ಗ್ಯಾಸ್ ವಿತರಕರಾದ ಬೆಂಗಳೂರ್‌ನ ಅಮ್ಮುವ್ವನ ವಾಸು, ಮೇಕೇರಿ ಗ್ರಾಮದ ಕಾಫೀ ವ್ಯಾಪಾರಸ್ಥರಾದ ದೇವಜನ ಕುಶಾಲಪ್ಪ (ಸನ್ನು), ವಕೀಲರಾದ ಕೊಡೆಕಲ್ ವಿದ್ಯಾದರ ಮುಂತಾದವ್ ಎಲ್ಲಾ ಎರಡೂ ತಂಡದ ಆಟಗಾರರಿಗೂ ವೈಯಕ್ತಿಕ ಟ್ರೋಫಿನ ನೀಡೊಲೊ.

ಬ್ಯಾಟ್ಸ್‌ಮನ್ ಪ್ರಶಸ್ತಿನ "ಅವಂದೂರು ತಂಡದ "ಪಟ್ಟಡ ದೀಪಕ್ ಪ್ರಭಾಕರ್" ಪಡ್‌ಕಂಡೊ, ಒಳ್ಳೆ ಬೌಲರ್ ಪ್ರಶಸ್ತಿನ "ಪೆರಾತ ಬಿ ಅರ್‍ವತ್ತೊಕ್ಲು ತಂಡದ ಕಡ್ಯದ ಸವಿಯವ್ ಪಡ್‌ಕಂಡೊ. ಸರಣಿ ಪುರುಷನಾಗಿ " ಸತೀಶ ಪ್ರೆಂಡ್ಸ್ ಚೇರಂಗಾಲ" ತಂಡದ ಮೊಟ್ಟನ ಅರುಣ್‌ನವು ಮತ್ತೆ ಪಂದ್ಯ ಪುರುಷನಾಗಿ " ಸತೀಶ್ ಪ್ರೆಂಡ್ಸ್ ಚೇರಂಗಾಲ" ತಂಡದ ಮೊಟ್ಟನ ಮನುನವು ಪಡ್‌ಕಂಡೊ.

ಪ್ರಶಸ್ತಿ ಪ್ರಧಾನ ಸಮಾರಂಭದ ಅಧ್ಯಕ್ಷತೆನ ಕೆದಂಬಾಡಿ ಕುಟುಂಬದ ಹಿರಿಯವು ಪಟ್ಟೆದಾರರಾದ ಸುಬ್ಬಯ್ಯನವ್ ಕೊಡ್‌ಗ್ ಮತ್ತೆ ದ. ಕನ್ನಡ ಗೌಡ ಅಭಿವೃದ್ಧಿ ಸಂಘದ ಅಧ್ಯಕ್ಷ ಕೋರನ ಪೂಣಚ್ಚ, ಕೊಡ್‌ಗ್ ಗೌಡ ವಿದ್ಯಾಸಂಘದ ಅಧ್ಯಕ್ಷ ಕುಯ್ಯಮುಡಿ ಪೂರ್ಣಯ್ಯ, ಭಾಗಮಂಡಲ ಗೌಡ ಸಮಾಜದ ಅಧ್ಯಕ್ಷ ಬೇಕಲ್ ಜಯರಾಮ ಗೌಡ, ಮುಂತಾದವ್ ಪಾಲ್ಗೊಂಡಿದ್ದೊ. ಅಲ್ಲದೆ ನೆಂಟ್ರ್‌ಗಳಾಗಿ ಶ್ರೀ ಕೆದಂಬಾಡಿ ರಾಜು ಮುಖ್ಯ ಇಂಜಿನಿಯರ್, ಶ್ರೀಮತಿ ಪೊನ್ನೆಟಿ ಶಾಂತಿ ಪೊನ್ನಪ್ಪ ಪಂಚಾಯತ್ ಅಧ್ಯಕ್ಷೆ, ಶ್ರೀ ಕುಂಜಿಲನ ಸುರೇಶ P.W.D ಕಾಂಟ್ರಾಕ್ಟರ್ ಪಟ್ಟಡ ಪ್ರಭಾಕರ್, ಕೊಡಗ್ ಸಂಗಾತಿ ಮೈಸೂರು, ತಡಿಯಪ್ಪನ ಕುಮಾರಜಯ, ಕೊಡಗ್ ಗೌಡ ಮಾಜಿ ಸೈನಿಕರ ಕ್ಷೇಮಾಭಿವದ್ಧಿ ಸಂಘ ಮೈಸೂರು, ಮತ್ತೆ ಶ್ರೀ ದೇವಜನ ಸನ್ನು ಕುಶಾಲಪ್ಪ, ಕಾಫಿ ಪ್ಲಾಂಟರ್ ಇವು ಉಪಸ್ಥಿತರಿದ್ದೊ.

ಕೊಡಗು ಜಿಲ್ಲಾ ಉತ್ತಮ ಶಿಕ್ಷಕ ಪ್ರಶಸ್ತಿ ಪಡ್ದ ಶ್ರೀ ಕೆದಂಬಾಡಿ ಪುಟ್ಟಯ್ಯನವ್ರನ್ನು ಇದೇ ಸಂದರ್ಭಲಿ ಕೆದಂಬಾಡಿ ಯುವಕ ಸಂಘದ ವತಿಯಿಂದ ಕಾರ್ಯದರ್ಶಿ ಗಿರಿತಿಮ್ಮಯ್ಯ ಶಾಲು ಹೊದಿಸಿ ಸನ್ಮಾನಿಸಿದೊ.

ಸಭೆ ಸುರ್‌ಲಿ ಪ್ರಾರ್ಥನೆನ ಕೆದಂಬಾಡಿ ಕೃಪ ಮತ್ತೆ ಕೆದಂಬಾಡಿ ಶೃತಿ ಮಾಡ್ದ್‌ರೆ, ಸ್ವಾಗತನ ಕೊಡ್‌ಗ್ ಗೌಡ ಸಾಂಸ್ಕೃತಿಕ ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್‌ನವ್, ವಂದನಾರ್ಪಣೆನ ಕೆದಂಬಾಡಿ ವಾಸುನವು ನೆರವೇರಿಸಿದೊ. ಗೆದ್ದವರ ಹೆಸ್ರ್‌ಗಳ್ನ ಅಕಾಡೆಮಿ ಪ್ರಧಾನ ಕಾರ್ಯದರ್ಶಿ ಕೋಡಿ ಚಂದ್ರಶೇಖರ್ ಓದಿದೊ. ಈ ಸಂದರ್ಭಲಿ ಅಕಾಡೆಮಿ ಖಜಾಂಚಿ ಕುಂಜಿಲನ ಸತೀಶ್, ಕಾರ್ಯದರ್ಶಿ ಕುದುಕುಳಿ ಭರತ್, ನಿರ್ದೇಶಕರ್‌ಗಳಾದ ನಡುವಟ್ಟಿರ ಅನಂತ್, ಮೊಟ್ಟನ ಅಮುಲ್ ದೇವಯ್ಯ, ಅಂಚೆಮನೆ ಸುಧಿ, ಬೊಳ್ಳೂರು ವೆಂಕಪ್ಪ, ಬೈತಡ್ಕ ಅರುಣ್‌ಕುಮಾರ್, ಕುಲ್ಲಚನ ದಿನೇಶ್, ಕುದುಪಜೆ ಚಿಣ್ಣಪ್ಪ ಮತ್ತೆ ಕೆದಂಬಾಡಿ ಯುವಕ ಸಂಘದ ಅಧ್ಯಕ್ಷ ಕೆದಂಬಾಡಿ ಕುಮಾರ್, ಕಾರ್ಯದರ್ಶಿ ಕೆದಂಬಾಡಿ ಕವಿ ಪ್ರಸಾದ್ ಮುಂತಾದವ್ ಹಾಜರಿದ್ದೊ.

ನಂತರ ಲಾಟ್ರಿ ಯೋಜನೆಯಡಿ ½ ಪವನ್ ಚಿನ್ನ 0886 ನಂಬರ್‌ಗೆ ಬಂದರೆ ¼ ಪವನ್ ಚಿನ್ನ 0398 ನಂಬರಿಗೆ ಬಂದುಟು, ಸಮಾದಾನಕರ ಬಹುಮಾನ -0122, 0049,1102, 1103, 1598 ಕ್ಕೆ ಸಿಕ್ಕಿಟು.

**ವರದಿ : ಕೋಡಿ ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ**

## ನಾರಿ - ಸ್ಯಾರಿ

ಹಣ ಇಡುವುದು ಬೀರಲ್ಲಿ
ನೋಟು ಎಣಿಸುವುದು ನೂರಾರು ಇಲ್ಲಿ
ಅಕ್ಕಿ ಅಳೆಯುವುದು ಸೇರು, ಅನ್ನಕ್ಕೆ ಬೇಕು ಸಾರು,
ಹಬ್ಬಕ್ಕೆ ಬೇಕು ಖೀರು, ರುಚಿ ನೋಡಿ ಸಾರ್,
ಕುಡಿಯೋಕೆ ಬೇಕು ನೀರು, ಓಡಿಸೋಕೆ ಬೇಕು ಕಾರು,
ಪಾರ್ಟಿಗೆ ಬೇಕು ಬಿಯರ್, ಕುಣಿಯೋಕೆ ಬೇಕು ಡಿಯರ್
ಹೆಣ್ಣು ನೀ ಎಷ್ಟು ಚೆನ್ನ, ನೋಡಿದೆ. ಇಂದು ನಾ, ನಿನ್ನ
ಪ್ರೀತಿಸೋಕೆ ಬೇಕು ನಾರಿ, ಉಡುವಳು ಅವಳು ಸ್ಯಾರಿ,
ಕಳ್ಳನು ಕೊರೆಯುವನು ಕನ್ನ, ಮಕ್ಕಳಿಗೆ ಹಾಕುವನು ಅನ್ನ
ಬದುಕಲು ಬೇಕು ಯುಕ್ತಿ, ದುಡಿಯಲು ಬೇಕು ಶಕ್ತಿ
ಹಕ್ಕಿಯೇ ಗಗನಕ್ಕೆ ಹಾರು, ನೀ ಗೆಳೆಯರೊಂದಿಗೆ ಸೇರು

ಅಜಡ್ಕ ರಾಣಿ ಬಾಲಕೃಷ್ಣ, ಕುಶಾಲ ನಗರ.

ಭೂಮಿ ತಾಯಿಯು ವಸಂತ ಋತುವಿನಲ್ಲಿ ಫಲಭರಿತಳಾಗಲು ಬರುವ ಶುಭ ಚಿಹ್ನೆಯೇ ಖೆಡ್ಡಾಸ ಹಬ್ಬ

# ಮೈಸೂರಿನಲ್ಲಿರುವ ಕೊಡಗು ಗೌಡ ವಿದ್ಯಾಸಂಘದ ಉಪಸಮಿತಿ ರದ್ದು.

## ಮಡಿಕೇರಿ ಕೇಂದ್ರ ಸಮಿತಿಯ ಕ್ರಮ ಮತ್ತು ನೇರ ಉಸ್ತುವಾರಿ

ಅಧಿಕಾರ ಎಂಬುದು ಮನುಷ್ಯನಿಗೆ ಜೀವನದಲ್ಲಿ ಬಂದು ಹೋಗುವುದು ಸಹಜ. ಯಾವಾಗ ಬರುತ್ತದೆ, ಹೋಗುತ್ತದೆ ಎಂಬುದು ಯಾರು ಹೇಳಲಾಗುವುದಿಲ್ಲ. ಯಾವುದೇ ಒಂದು ಸಂಸ್ಥೆಯ ಅಧಿಕಾರ ಯಾರಿಗೂ ಪೂರ್ಣಾವಧಿಯಾಗಿರುವುದಿಲ್ಲ. ಆದುದರಿಂದ ಎಷ್ಟು ಸಮಯ ಅಧಿಕಾರ ಇರುತ್ತದೊ ಅಷ್ಟು ದಿನ ತನಗೆ ದೊರೆತ ಅವಕಾಶವನ್ನು ದುರುಪಯೋಗ ಪಡಿಸದೆ ಜನರ ಸೇವೆ ಮಾಡಿ ಶ್ಲಾಘನೆಗೆ ಒಳಗಾಗುವುದು ಪ್ರತಿಯೊಬ್ಬರ ಗುರಿಯಾಗುತ್ತದೆ.

ಆದರೆ ನಮ್ಮ ಮೈಸೂರಿನ ವಿದ್ಯಾಸಂಘದ ಉಪಸಮಿತಿಯ ಗುರಿ ಹಾಗಾಗಿರಲಿಲ್ಲ. ಅಧಿಕಾರದಲ್ಲಿ ನಾಲ್ಕು ಜನರಿಗೆ ಪ್ರಯೋಜನವಾಗದಿದ್ದರೂ, ಹುದ್ದೆಯ ಹೆಸರಿನಿಂದ ಹೊರಗಡೆಯ ಜನರ ಗಮನ ಸೆಳೆದು, ನಾನು ಅಧ್ಯಕ್ಷ, ನಾನು ಕಾರ್ಯದರ್ಶಿ, ನಾನು ಉಪಾಧ್ಯಕ್ಷ ನಾನು ನಿರ್ದೇಶಕ ಹೀಗೆ ಹೇಳಿಕೊಂಡು ಗತ್ತಿನಿಂದ ತಿರುಗಾಡುವುದಾಗಿತ್ತು. ಮೈಸೂರಿನಲ್ಲಿ ಗೌಡ ಸಮಾಜವೇ ಇರುವುದಿಲ್ಲ, ಅಂದಹಾಗೆ ಇದು ಮಡಿಕೇರಿಯ ಕೊಡಗು ಗೌಡ ವಿದ್ಯಾಸಂಘದ ಒಂದು ಶಾಖೆಯಷ್ಟೆ ಮುಖ್ಯ ಶಾಖೆಯಿಂದ ಅಧ್ಯಕ್ಷರು ಹಾಗೂ ಸಮಿತಿಯವರಿಗೆ ಆಗಾಗ್ಗೆ ಬಂದು ಮೈಸೂರಿನ ಉಸ್ತುವಾರಿಯನ್ನು ನೋಡಿಕೊಳ್ಳಲು ಸಾಧ್ಯವಿಲ್ಲದ್ದರಿಂದ ಮಡಿಕೇರಿಯ ಕೇಂದ್ರೀಯ ಸಮಿತಿಯವರು, ಮೈಸೂರಿನಲ್ಲಿ ನೆಲೆಸಿರುವ ನಮ್ಮ ಅರೆಭಾಷಿಕ ಗೌಡ ಜನಾಂಗದವರಲ್ಲಿ ಕೆಲವರನ್ನು ಉಪಸಮಿತಿಗೆ ತೆಗೆದುಕೊಂಡು, ಆ ಸಮಿತಿ ಮೂಲಕ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ನೇಮಿಸಿತು. ಹೀಗೆ ಇದು ಸುಮಾರು ವರ್ಷಗಳಿಂದ ನಡೆದು ಬಂದು, 2000ದ ಇಸವಿಗೆ ಅವಸಾನಗೊಂಡಿದ್ದು ವಿಷಾದನೀಯವಾಗಿದೆ. ಕಾರಣ ದಿನಾಂಕ 30-1-2000ದ ತಾರೀಖಿಗೆ ಮಡಿಕೇರಿಯವರು ಮೈಸೂರಿನಲ್ಲಿ ಹೊಸದಾಗಿ ನಿರ್ಮಿಸಿದ ಅಡುಗೆ ಮನೆಯ ಉದ್ಘಾಟನೆಯನ್ನು ಅಂದಿನ ಮೀಟಿಂಗ್‌ನ ಜೊತೆಯಲ್ಲಿಯೇ ನೆರವೇರಿಸಿ ಹೋಗಲು ಯೋಜಿಸಿದ್ದರು. ಆದುದರಿಂದ ಇಲ್ಲಿನ ಉಪಸಮಿತಿಯವರಿಗೆ ನೋಟಿಸ್ಸನ್ನು ಕಳುಹಿಸಲಾಗಿತ್ತು. ಆದರೆ 30-1-2000ರ ಮೀಟಿಂಗ್‌ಗೆ ಇಲ್ಲಿನ ಸಮಿತಿಯವರು ಯಾವುದೆ ತಿಳುವಳಿಕೆ ನೀಡದೆ ಯಾರೊಬ್ಬರು ಹಾಜರಾಗದೆ, ಮಡಿಕೇರಿಯವರಿಗೆ ಅಗೌರವ ತೋರಿಸಲಾಯಿತು. ಏಕೆಂದರೆ ಸಮಿತಿಯವರಿಗೆ ಕಾರಣವಂತೆ. ಆದರೂ ಮಡಿಕೇರಿಯ ಕೇಂದ್ರಿಯ ಸಮಿತಿಯವರು ಮೈಸೂರಿನಲ್ಲಿ ಇರುವ ಸಮಿತಿಗೆ ಮಾನವೀಯತೆಯ ದೃಷ್ಟಿಯಿಂದ ಪುನಃ ಒಂದು ಅವಕಾಶವನ್ನು ಕಲ್ಪಿಸಿ, ದಿನಾಂಕ 6-2-2000 ರಂದು ಆಹ್ವಾನಿಸಲಾಯಿತು. ಆದರೆ ಅಂದಿನ ಸಭೆಗೆ ಪ್ರತಿಯೊಬ್ಬರು ಹಾಜರಾಗಿದ್ದರು. ಅದರಂತೆ ನೂತನ ಅಡಿಗೆ ಕೋಣೆಯನ್ನು ಉದ್ಘಾಟಿಸಲಾಗಿ ನಂತರ ಈ ಸಭೆಯಲ್ಲಿ ಕೆಲವು ಚರ್ಚೆ ನಡೆಯಿತು.

ಆದರೆ ಈ ಹಿಂದೆಯೇ ಕೇಂದ್ರೀಯ ಸಮಿತಿಯವರ ಗಮನಕ್ಕೆ ಬಾರದೆ ಹೊಸ ಕಮಿಟಿಯನ್ನು ನೇಮಿಸಿ, ಅವರಿಗೆ ಬೇಕಾದವರನ್ನು ಹೊಸ ಸಮಿತಿಗೆ ನೇಮಕ ಮಾಡಿಕೊಂಡಿತು. ಇದು ಸಹ ಕೇಂದ್ರ ಸಮಿತಿಯವರಿಗೆ ಮಾಡಿದ ಅವಮಾನವಾಗಿತ್ತು, ಆದರೆ ಎರಡನೇ ಸಲ ಆಹ್ವಾನಿಸಿದಾಗ ಆಹ್ವಾನ ಕಾರ್ಡಿನಲ್ಲಿ ಯಾರು ಸಹಿ ಮಾಡಿರಲಿಲ್ಲವಂತೆ, ಹಾಗಿರುವಾಗ ಮೊದಲು ಆಹ್ವಾನವಿತ್ತಾಗ ಬಾರದಿರುವ ಔಚಿತ್ಯವಾದರೂ ಏನು? ಎಂಬ ಸಂಶಯ ಪ್ರತಿಯೊಬ್ಬರಿಗೂ ಕಾಡುತ್ತಿತ್ತು. ಅಂದರೆ ಮೈಸೂರಿನ ಈ ಉಪಸಮಿತಿಯವರು ನಾಮಕಾವಸ್ಥೆಗೆ ಮಾತ್ರ ಒಂದು ಗುಂಪಾಗಿದ್ದುಕೊಂಡು ಬೇರೆಯವರಿಗೆ ಅವಕಾಶ ಕೊಡದಿರುವ ಬಗ್ಗೆ ಗಮನಿಸಿದ ಕೇಂದ್ರೀಯ ಸಮಿತಿಯು ಮೈಸೂರಿನಲ್ಲಿದ್ದ ಉಪಸಮಿತಿಯನ್ನು ರದ್ದು ಪಡಿಸಿದೆ ಎಂದು ಅವರ ಮುಂದೇನೇ ಘೋಷಿಸಿದರು. ತಾನು ತೋಡಿದ ಗುಂಡಿಗೆ ತಾನೇ ಬಿದ್ದ ಉಪಸಮಿತಿ ಇನ್ನು ಮುಂದೆಯಾದರು ಚಿಂತಿಸುವಂತಾಗಲೆಂದು ಆಶಿಸುತ್ತೇನೆ.

**ಕೊಡಗು ಗೌಡ ವಿದ್ಯಾಸಂಘದ ಓರ್ವ ಸದಸ್ಯ**

---

### ಆಗದಿರ್ದ್ಲೆ

ರವಿ ಪಡುವಣಲುಟ್ಟುದುಲೆ
ದೇವತೆ ನೆಲ ಮೆಟ್ಟುದುಲೆ
ಭೂಮಿ ಸುತ್ತ ತಿರ್‌ಗದಿರ್ದ್ಲೆ
ಈ ಸಂಗಾತಿ ಬೆಳ್ದ್ ದೊಡ್ಡದಾಗದಿರ್ದ್ಲೆ

ಸಣ್ಣ ಗಿಡ ಮರ ಆಗದಿರ್ದ್ಲೆ
ಮರ ಆದ ಮ್ಯಾಲೆ ಬಗ್ಗುದುಲೆ
ಬಿಸ್‌ಲ್ ಮಳೆ ಗಾಳಿಗದ್ ಜಗ್ಗುದಲೆ
ಈ ಸಂಗಾತಿ ಮುಂದೆ ಹಾಂಗೆ ಆಗದಿರ್ದ್ಲೆ

ಎಳೆಕಂದ ಎತ್ತರಾಗದಿರ್ದ್ಲೆ
ಎಳೆ ಕರ್ ಅದ್ ಎತ್ತಾಗದಿರ್ದ್ಲೆ
ಎತ್ತನೋಡ್ರು ಬಾನ್‌ಲಿ ತಾರೆ ಕಾಣದಿರ್ದ್ಲೆ
ಈ ಸಂಗಾತಿ ಬೆಳ್ದ್ ದೊಡ್ಡದಾಗದಿರ್ದ್ಲೆ

ಕಪ್ಪು ಮೋಡ ಕರ್‌ಗದಿರ್ದ್ಲೆ
ಗಾಳಿ ಬೀಸದಿರ್ದ್ಲೆ, ಬೆಂಕಿ ಹೊತ್ತದಿರ್ದ್ಲೆ
ಜಾರಿ ಬಿದ್ದಂವ ಏಳದಿರ್ದ್ಲೆ
ಈ ಸಂಗಾತಿ ಎದ್ದ್ ಮುಂದೆ ಓಡದಿರ್ದ್ಲೆ.

**ಪೂಜಾರಿರ ಜಗದೀಶ್. ಬಿಳಿಗೇರಿ**

---

ಖೆಡ್ಡಾಸ ಹಬ್ಬದಂದು ಭೂಮಿತಾಯಿ ಋತುಮತಿಯಾಗುವಳು

# ವ್ಯಕ್ತಿ ಪರಿಚಯ : ದೇಶದ ಪ್ಯಾರಮಿಲಿಟರಿ (CRPF) ಮಹಿಳಾ ಬ್ಯಾಟಲಿಯನ್‌ನಲ್ಲಿ ಪ್ರಥಮ ಅರೆಭಾಷಿಕ ಗೌಡವತಿ ಹವಲ್ದಾರ್ ಪಟ್ಟಡ ನಳಿನಿಕುಮಾರಿ(ರೂಪ) (ಈಗ ಶ್ರೀಮತಿ ದೇವಾಯಿರ ಶಿವಪ್ರಕಾಶ್)



ಮಡಿಕೇರಿ ತಾಲ್ಲೂಕಿನ ಅವಂದೂರು ಗ್ರಾಮದ ಪಟ್ಟಡ ಉಲ್ಲಾಸ ಮತ್ತು ಸುಜಾತ ದಂಪತಿಗಳ ಪ್ರಥಮ ಪುತ್ರಿಯಾಗಿ 20-5-1970 ರಲ್ಲಿ ಜನಿಸಿದ ಇವರು ಓದಿದ್ದು ಅವಂದೂರಿನ ಸರಕಾರಿ ಮಾದರಿ ಪ್ರಾಥಮಿಕ ಶಾಲೆಯಲ್ಲಿಯೂ, 6 ರಿಂದ 10ನೇ ತರಗತಿಯವರೆಗೆ ಬೆಟ್ಟಗೇರಿಯ ಸರ್ಕಾರಿ ಶಾಲೆಯಲ್ಲಿಯೂ, ಪದವಿ ಪೂರ್ವ ಶಿಕ್ಷಣವನ್ನು ಭಾಗಮಂಡಲದ ಕಾವೇರಿ ಪದವಿಪೂರ್ವ ಕಾಲೇಜಿನಲ್ಲಿ ಓದಿದರು. ಇವರಿಗೆ 4 ಸಹೋದರಿಯರು, ಒಬ್ಬ ಸಹೋದರ ಇದ್ದಾನೆ.

1989ರ ಜನವರಿಯಲ್ಲಿ ಪ್ರಪ್ರಥಮ ಬಾರಿಗೆ ಕೇಂದ್ರ ಮೀಸಲು ಪೋಲಿಸ್ ಪಡೆ ಕರ್ನಾಟಕಕ್ಕೆ ಆಯ್ಕೆಗೆ ಬಂದಾಗ ಬೆಂಗಳೂರಿನ ಯಲಹಂಕದಲ್ಲಿ ಆಯ್ಕೆ ನಡೆಯಿತು. ಆಗ CRPFಎಂದರೆ ಏನೆಂದು ಗೊತ್ತಿರದ ಇವರು ಆಯ್ಕೆಗೆ ಹೋದರೆ ಬಹುಷ ಆಯ್ಕೆಯಾಗಬಹುದು ಎಂಬ ವಿಶ್ವಾಸವಿದ್ದರು, ದೈವಾನುಗ್ರದಿಂದ ಇವರು ಕಂಡ ಕನಸ್ಸು ನನಸಾಗಿ CRPFಗೇ ಆಯ್ಕೆಯಾದರು. ಬಹುಷ ಇವರೇ ನಮ್ಮ ಅರೆಭಾಷೆ ಗೌಡ ಜನಾಂಗದ ಪ್ರಥಮ CRPF ಮಹಿಳಾ ಯೋಧೆಯೆಂದು ಹೆಮ್ಮೆಯಿಂದ ಹೇಳಬಹುದು.

ವಿಶ್ವದ ಪ್ರಥಮ ಮಹಿಳಾ ಬೆಟಾಲಿಯನ್ ಅನ್ನು 1986ರ ಫೆಬ್ರವರಿ 6 ರಂದು ನವದೆಹಲಿಯಲ್ಲಿ ಪ್ರಥಮ ಬಾರಿಗೆ ದಿವಂಗತ ಶ್ರೀ ರಾಜೀವ್ ಗಾಂಧಿಯವರ ನೇತೃತ್ವದಲ್ಲಿ ಪ್ರಾರಂಭಿಸಲಾಯಿತು. ಆಗ ಕೇವಲ ಒಂದೇ ಒಂದು ಮಹಿಳಾ ಬೆಟಾಲಿಯನ್ ಇತ್ತು. ನಂತರ ಪುನಃ ಎರಡನೇ ಮಹಿಳಾ ಬೆಟಾಲಿಯನ್ ಅನ್ನು ಗುಜರಾತಿನ ಗಾಂಧಿನಗರದಲ್ಲಿ ಪ್ರಾರಂಭಿಸಿದರು

ಆಯ್ಕೆಯಾದ ನಂತರ ಮೂಲ ತರಬೇತಿಗಾಗಿ ನವದೆಹಲಿಗೆ ಕಳುಹಿಸಲಾಯಿತು. ಅಲ್ಲಿ 9 ತಿಂಗಳು ತರಬೇತಿ ನಡೆಯಿತು. ಅದರಲ್ಲಿ ಮೊದಮೊದಲು ಸ್ವಲ್ಪ ಕಷ್ಟವನ್ನು ಅನುಭವಿಸಿದ್ದರೂ, ಆ ಕಷ್ಟವನ್ನು ನೆನೆಸದೆ ಇವರು ಮೂಲ ತರಬೇತಿಯನ್ನು ಚಳಿ ಬಿಸಿಲೆನ್ನದೇ ಮುಗಿಸಿದರು. ಅದರಲ್ಲಿ ಇವರಿಗೆ 3 ತಿಂಗಳು ಮೂಲತರಬೇತಿ ನಂತರ 6 ತಿಂಗಳು Weapons ಅಂದರೆ ಆಯುಧಗಳನ್ನು ಯಾವ ರೀತಿ ಬಳಸ ಬೇಕು, ಯಾವ ಪರಿಸ್ಥಿತಿಯಲ್ಲಿ ಎಂಥಾ ಆಯುಧಗಳನ್ನು ಹೇಗೆ ಬಳಸಬೇಕೆಂಬುದರ ಬಗ್ಗೆಯೂ ತರಬೇತಿಯಲ್ಲದೆ ತಮ್ಮ ಸ್ವರಕ್ಷಣೆಗೆ ಬೇಕಾದ ಕರಾಟೆ, ಫೈಟಿಂಗ್, ಶತ್ರುಗಳ ಮೇಲೆ ಒಮ್ಮಿಂದೊಮ್ಮೆಗೆ ಮುಗಿ ಬೀಳುವ ಯುದ್ಧ ಕಲೆಯಲ್ಲಿ ನಿಪುಣತೆ ಇತ್ಯಾದಿ ಹಲವಾರು ಬಗೆಯ ತರಬೇತಿಯನ್ನು ಪಡೆದಿರುವ ಧೀರೆ ಇವಳು.

1989ರ ಗಣರಾಜ್ಯೋತ್ಸವ ಪೆರೇಡ್‌ನಲ್ಲಿ ಇವರ ಮಹಿಳಾ ವಿಭಾಗವು ಪ್ರಥಮ ಬಾರಿಗೆ ಭಾಗವಹಿಸಿತು. ಅದರಲ್ಲಿ ರೂಪನವರು ಇದ್ದಾರೆಂದು ಹೇಳಲು ಇವರಿಗೆ ಬಹಳ ಹೆಮ್ಮೆಯಾಗುತ್ತದೆ. ಇವರು 3 ಬಾರಿ ಗಣರಾಜ್ಯೋತ್ಸವ ಪೇರೆಡ್‌ನಲ್ಲಿ ಭಾಗವಹಿಸಿದ್ದಾರೆ. ಪೇರೆಡ್ ಮಾಡುವುದೆಂದರೆ ತುಂಬಾ ಇಷ್ಟವಿರುವ ಇವರಿಗೆ ಮಾಡಿದ ಪೇರೆಡ್‌ಗಳಲ್ಲಿ ಹಲವಾರು ಪ್ರಶಂಸಾ ಪತ್ರಗಳು ಕೂಡ ಸಿಕ್ಕಿವೆಯೆಂದು ಸಂಗಾತಿಗೆ ಮನವರಿಕೆ ಮಾಡಿದರು.

ತರಬೇತಿ ಮುಗಿದ ಬಳಿಕ 1990ರಲ್ಲಿ ಮೊದಲ ಬಾರಿಗೆ ಶ್ರೀನಗರಕ್ಕೆ ಡ್ಯೂಟಿಗಾಗಿ ಕಳಿಸಿದ್ದರು. 1991ರಲ್ಲಿ ಡೆಲ್ಲಿಯಲ್ಲಿಯೂ, 1992ರಲ್ಲಿ ಅಯೋಧ್ಯೆಯಲ್ಲಿಯೂ 1993-1995 ರವರೆಗೆ ಮತ್ತೊಮ್ಮೆ ಶ್ರೀನಗರದಲ್ಲಿ ಡ್ಯೂಟಿ ಮಾಡುವ ಸಂದರ್ಭ ಸಹ ಸಿಕ್ಕಿರುತ್ತದೆ. 1994ರ ಸುಮಾರಿಗೆ ಆಂಧ್ರ ಪ್ರದೇಶದ ರಾಜಮಂಡ್ರಿಯಲ್ಲಿ ನಡೆದ ಗಲಭೆಯನ್ನು ಹತ್ತಿಕ್ಕುವಲ್ಲಿ ಮಹಿಳಾ ವಿಶೇಷ ಪಡೆಯನ್ನು ಬಳಸಿದ್ದರು. ಆನಂತರ 1995 ರ ಕೊನೆಗೆ ಕೇರಳದ ತಿರುವನಂತರ ಪುರಂನಲ್ಲಿ 105 R.A.F ಬೆಟಾಲಿಯನ್‌ನಲ್ಲಿ ಕರ್ತವ್ಯ ನಿರತರಾಗಿದ್ದು, ಈಗ ಹುಟ್ಟೂರಾದ ಕರ್ನಾಟಕದ ಬೆಂಗಳೂರಿನ ಯಲಹಂಕದಲ್ಲಿ ಇವರ ಪತಿಯವರಾದ ಶಿವಪ್ರಕಾಶ್‌ರೊಡನೆ ದಂಪತಿಗಳಾಗಿ ಇದೇ ಬೆಟಾಲಿಯನ್‌ನಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಇದು ಬಹುಷ್ಯ ಜನಾಂಗದಲ್ಲಿಯೇ ಪ್ಯಾರಮಿಲಿಟರಿ ಫೋರ್ಸ್‌ನಲ್ಲಿ ದಂಪತಿಗಳೆಂದು ಹೇಳಬಹುದು. 10 ವರ್ಷದ ಸರ್ವಿಸ್‌ನಲ್ಲಿ ಹಲವಾರು ಸ್ಥಳಗಳಲ್ಲಿ ಕಳೆದಿದ್ದಾರೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಯಾವುದೇ ಕಷ್ಟ ಬಂದರು ಎಲ್ಲಿಯೇ ಏನಾದರು ಗಲಭೆಗಳಾದಲ್ಲಿ ಮಹಿಳೆಯರಿಗೆ ಸಂಭಂಧ ಪಟ್ಟಂತ ಗಲಭೆಗಳಲ್ಲಿ ಕರ್ತವ್ಯದಲ್ಲಿ ಹಾಜರಾಗಿರುತ್ತಿದ್ದರು.

ಅರೆಭಾಷೆ ಮಹಿಳಾ ಯುವತಿಯರಲ್ಲಿ ಮೊದಲ ಬಾರಿಗೆ 1989 ರಲ್ಲಿ ಆಯ್ಕೆಯಾದವರಲ್ಲಿ ಒಬ್ಬಳು ಇವಳಾದರೆ ಇನ್ನೊಬ್ಬಳು ಭಾಗಮಂಡಲದ ಚೇರಂಗಾಲ ಗ್ರಾಮದ ಹೊಸೂರು ಸುಬ್ರಾಯನವರು ಮಗಳು ತುಳಸಿ. ಇವರಿಬ್ಬರು ಒಂದೇ

ಖಿಡ್ಡಾಸ ಹಬ್ಬದಲ್ಲಿ ಅರೆಭಾಷೆ ಗೌಡರು ಶ್ರದ್ಧಾ ಭಕ್ತಿ ಭಾವಗಳಿಂದ ಭೂಮಿ ತಾಯಿಯನ್ನು ಪೂಜಿಸುತ್ತಾರೆ 13ನೇ ಪುಟಕ್ಕೆ

# ಗೌಡಜನಾಂಗ - ಜೀವಾಳ :

ಶ್ರೀಮತಿ ಎನ್. ಲಲಿತಾ, ಎಂ.ಎ.ಎಂ.ಎಡ್,ಪ್ರಾಧ್ಯಾಪಕಿ,
ಸರ್ಕಾರಿ ಕಿರಿಯ ಮಹಾವಿದ್ಯಾಲಯ- ಪುತ್ತೂರು.

## ಜನಾಂಗ ಪರಂಪರೆ:

ಆಧಾರ- 1) ಕನ್ನಡ ನಾಡಿನ ಒಂದು ಜನಾಂಗ ಸೂಚಕ ಪದ 'ಗೌಡ', ಈ ಪದದ ಹಿಂದೆ ಹಿರಿಯ ಪರಂಪರೆಯ ಸತ್ತ್ವವಿದೆ. 'ಗೌಡ' ಎಂಬ ಶಬ್ದಕ್ಕೆ ಹಿರಿಯ; ಅನುಭವಿ, ಬುದ್ಧಿವಂತ, ಗುರಕಾರ, ಯಜಮಾನ, ಗ್ರಾಮಮಣಿ ಎಂಬ ಅರ್ಥಗಳಿವೆ. ಪಂಡಿತ ಮಂಡಳಿಯ ಚರ್ಚಾಧರಿತ ನಿರ್ಣಾಯದಂತೆ 'ಗೌಡ' ಎಂಬ ಪದವು ಹೀಗೆ ಬಂದಿದೆ.

ಗ್ರಾಮವೃದ್ಧ -ಗಾಮುಂಡ-ಗಾವುಂಡ-ಗಾವುಡ-ಗವುಡ-ಗೌಡ.

ಈ ಗೌಡ ಸಮಾಜವು 20 ಸಾವಿರ ವರ್ಷಗಳ ಹಿಂದೆಯೇ ಕನ್ನಡ ನಾಡಿನಲ್ಲಿದ್ದು ಸಂಸ್ಕೃತದ ಪದ 'ಗ್ರಾಮ ವೃದ್ಧ' ಎಂಬುದರಿಂದ ಸ್ವೀಕೃತವಾಗಿತ್ತು. ಕನ್ನಡದಲ್ಲಿ ಅದು ಗಾಮುಂಡ ನೆಂದಾದುದಕ್ಕೆ ಕ್ರಿ. ಶ. 7ನೇ ಶತಮಾನದ ಶಾಸನ ಆಧಾರವಿದೆ. ತಮಿಳು ಪ್ರಾಂತದಲ್ಲಿ ಗಾವುಂಡ ಎಂದು ಜನಾಂಗ ಸೂಚಕ ಪದವಾಗಿ ಈಗಲೂ ಇರುವುದು. ಅಲ್ಲದೆ ತುಳುವರು ಈ ಜನಾಂಗದವರನ್ನು 'ಗಾವುಂಡ' ರೆಂದು ಹೇಳುತ್ತಿರುವುದನ್ನೂ ಗಮನಿಸಬಹುದು. ಇದರಿಂದ ಇಲ್ಲಿನ ತುಳುನಾಡವರು ಇಲ್ಲಿ ಬಂದು ನೆಲಸಿದ ಗೌಡ ಜನಾಂಗವನ್ನು ಆಗ ಕನ್ನಡದಲ್ಲಿ ಪ್ರಚಲಿತವಾಗಿದ್ದ ಗಾವುಂಡ ಎಂಬ ರೂಪದಿಂದ ಕರೆದಿರಬೇಕು. ಆ ಬಳಿಕವೇ ಅದು 'ಗೌಡ' ರೂಪವನ್ನು ಪಡೆದುದಾಗಿರಬೇಕು.

2) ಪ್ರಾಚೀನ ಕಾಲದಲ್ಲಿ ಬಂಗಾಳಕ್ಕೆ 'ಗೌಡದೇಶ' ಎಂದು ಹೆಸರಿತ್ತು. ಗೌಡ ಜನಾಂಗವು ಮೂಲ ದ್ರಾವಿಡ ಜನಾಂಗ ಬಂಗಾಳದಲ್ಲಿ ನೆಲೆಸಿದ್ದು, ಆರ್ಯನರ ಒತ್ತಡದಿಂದಾಗಿ ದಕ್ಷಿಣಕ್ಕೆ ವಲಸೆ ಬಂದು ಹೆಚ್ಚಾಗಿ ಈಗಿನ ಕರ್ನಾಟಕದ ಭಾಗದಲ್ಲಿ ನೆಲಸಿದರು. (ಇಂತಹ ರಾಜಕೀಯ, ಸಾಮಾಜಿಕ ಒತ್ತಡಗಳು ಇಂದು ನಡೆಯುತ್ತಿರುವುದರಿಂದಲೇ ಸಿಂಹಳೀಯರು, ಬಾಂಗ್ಲಾದೇಶದವರ ಪುನರ್ವಸತಿಯನ್ನು ಗಮನಿಸಿರಿ) ಗೌಡ ದೇಶವಾಸಿಗಳು ಎಲ್ಲಿದ್ದರೂ ಗೌಡರೆಂದೇ ಪ್ರಸಿದ್ಧ.

3) ಸಂಸ್ಕೃತದ ಕಾವ್ಯ ರೀತಿಗಳಲ್ಲಿ ಒಂದಾದ ಗೌಡೀ ರೀತಿಯಿಂದಲೂ ಗೌಡ ಜನಾಂಗದ ಮೂಲವನ್ನು ತಿಳಿಯಬೇಕು. ಈ ಗೌಡೀ ರೀತಿ ದೇಶವಾಚಿಯಾದ ಗೌಡ (ಬಂಗಾಳ)ದೇಶದ ಜನ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಿದ್ದುದರಿಂದ 'ಗೌಡ'ಎಂಬ ಪದವು ಗೌಡ ಜನಾಂಗದ ಸಂಸ್ಕೃತಿ ಸೂಚಕವಾಗಿದೆ. ಇಂದಿಗೂ ಗೌಡ ಸಂಸ್ಕೃತಿ ಉಳಿದ ಜನಾಂಗದವರ ಸಂಸ್ಕೃತಿ ರೀತಿಗಿಂತ ಭಿನ್ನ ಹಾಗೂ ವಿಶಿಷ್ಟವಾದುದಾಗಿದೆ.

4) ಕ್ರಿ.ಶ. ಸುಮಾರು 6-7 ಶತಮಾನಗಳ ಹಿಂದೆಯೇ 'ಗೌಟಿ" ಎಂಬ ಪದ ರೂಪ ದೇಶ ವಾಚಕವಾಗಿಯೂ, ಜನಾಂಗ ವಾಚಕ ವಾಗಿಯೂ ಇದ್ದು ಆ ಬಳಿಕ ಅಂದರೆ 12ನೇ ಶತಮಾನಕ್ಕೆ ಮೊದಲೇ ಗೌಡ ಎಂಬ ರೂಪವನ್ನು ಪಡೆದಿದೆ ಎಂಬುದಕ್ಕೆ ಕೇಶಿರಾಜನ 'ಶಬ್ದಮಣಿದರ್ಪಣ' ಎಂಬ ವ್ಯಾಕರಣ ಗ್ರಂಥ ಆಧಾರವಾಗಿದೆ. ಅದರ ಪ್ರಕಾರ ಗೌಟಂ-> ಗೌಳಂ->ಗೌಡಂ-> ಗೌಡ ಎಂದಾಗಿರುವುದು. ಇದರಿಂದಲೂ ಈ ಗೌಡ ಜನಾಂಗದ ಪರಂಪರೆ ಬಹಳ ಆದಿನಿಂದಲೇ ಆರಂಭವಾದುದೆಂಬುದು ಸ್ಪಷ್ಟ.

5)ಈಗಿನ ಗೌಡ ಜನಾಂಗದ ಒಂದು ವರ್ಗ (ಅರೆಭಾಷೆಯ ಗೌಡರು) ತಮ್ಮ ಎಲ್ಲಾ ಸಾಮಾಜಿಕ ಶುಭಕಾರ್ಯಗಳಲ್ಲಿ ಸಮಸ್ತರನ್ನು ಉದ್ದೇಶಿಸಿ "ಹತ್ತು ಕುಟುಂಬ ಹದಿನೆಂಟು ಗೋತ್ರ, ಬಂಧು ಬಾಂಧವರು ನೆಂಟರಿಷ್ಟರು." ಎಂದು ಹೇಳುವ ವಾಡಿಕೆ ಈಗಲೂ ಇರುವುದರಿಂದ ಬಂಗಾಳದಿಂದ ದಕ್ಷಿಣಕ್ಕೆ ವಲಸೆ ಬಂದಾಗ ಗೌಡರು ತಂಡ ತಂಡವಾಗಿ ಬಂದಿರಬೇಕು. ಇವರಲ್ಲಿ ಹತ್ತು ಕುಟುಂಬಕ್ಕೆ ಸೇರಿದ ಹದಿನೆಂಟು ಗೋತ್ರದವರು ಇಂದಿನ ದಕ್ಷಿಣ ಕನ್ನಡ ಮತ್ತು ಕೊಡಗು ಭಾಗಗಳಲ್ಲಿ ತಳವೂರಿದ್ದಿರಬೇಕು. ಬಟೆ-ವಂಶ, ಈಗಲೂ ಗೋತ್ರಕ್ಕೆ 'ಬಳಿ'ಯೆಂದು ಹೇಳುವುದಿದೆ.

6) ಆರ್ಯನರಿಂದ ಗೌಡ ಜನಾಂಗವು ಬಹು ದೊಡ್ಡ ಪಾಠ ಕಲಿತಿರಬೇಕು. ವೀರರಾದರೆ ಮಾತ್ರ ಸ್ಥಾನ. ಹೇಡಿಗಳಿಗೆ ಉಳಿಗಾಲವಿಲ್ಲ. ಕನ್ನಡ ನಾಡಿನಲ್ಲಿ ನೆಲಸಿದ ಗೌಡರು ಕಾಲಕ್ಕೆ ತಕ್ಕಂತೆ ವೀರಗುಣಗಳನ್ನು ಬೆಳೆಸಿಕೊಂಡರು. ಶಾಂತಿಯ ಕಾಲದಲ್ಲಿ ತಮ್ಮ ಜೀವನ ವೃತ್ತಿಯಾಗಿ ಬೇಸಾಯವನ್ನು ಅವಲಂಬಿಸಿ ಮಣ್ಣಿನ ಮಕ್ಕಳಾಗಿ ಬಾಳಿದರು. ಗೌಡರು ಸ್ವಭಾವತಃ ಕಷ್ಟಸಹಿಷ್ಣುಗಳು. ಕೃಷಿ ಪ್ರಧಾನ ಜೀವನ ವೃತ್ತಿಯುಳ್ಳವರೂ, ಶೌರ್ಯ, ಧೈರ್ಯ, ಪ್ರವೃತ್ತಿಯವರೂ ಆಗಿದ್ದರೆಂಬುದಕ್ಕೆ ಜಾನಪದ ಕತೆಗಳು, ಹಾಡುಗಳು, ಲಾವಣಿಗಳು ಸಾಕ್ಷ್ಯಾಧಾರಗಳಾಗಿವೆ. (ಉದಾ:- 'ಹೊನ್ನಮ್ಮನ ಕೆರೆ' ಎಂಬ ಜನಪದ ಹಾಡನ್ನು ಗಮನಿಸಿ) ದಾನಿ ಗಳೂ, ಗುಣಶೀಲರೂ, ಸತ್ಯವಂತರೂ, ನಿಷ್ಠೆಯುಳ್ಳವರೂ ಮತ್ತು ಸ್ವಾಮಿಕಾರ್ಯ ಸ್ವಕಾರ್ಯಗಳಲ್ಲಿ ಮೇಲ್ಮಟ್ಟದವರೆಂಬುದಕ್ಕೆ ಜಾನಪದದಲ್ಲಿ ಆಧಾರಗಳು ಸಾಕಷ್ಟಿವೆ. ಜೀವಾನುಭವಗಳ ಸಾರ ಸಂಪತ್ತನ್ನೊಳಗೊಂಡ ಗೌಡರ ಗಾದೆಗಳಲ್ಲಿ "ಅಳಿದ ಊರಿಗೆ ಉಳಿದವನೇ ಗೌಡ"- ಎಂದಾಗ ಪ್ರತಿಭಟಿಸಲು ಸಾಮರ್ಥ್ಯವಿಲ್ಲದೆ ನಾಶಹೊಂದಿದ ಊರಿಗೆ ಉಳಿದವನೇ ಪರಾಕ್ರಮಿ ಮುಖಂಡನೆನಿಸು ತ್ತಾನೆ ಎಂದು ಅರ್ಥವಾಗುತ್ತದೆ. ಇದರಿಂದ ಈ ಗೌಡ ಜನಾಂಗ ದವರು ಪರಾಕ್ರಮವನ್ನು ಮುಖ್ಯವಾಗಿ ಮೈಗೂಡಿಸಿಕೊಂಡು ಕೃಷಿ ವಿದ್ಯೆಯ ಮೂಲಕ ತಮ್ಮ ಸಾಮಾಜಿಕ, ಆರ್ಥಿಕ, ನೈತಿಕ, ಹಾಗೂ ರಾಜಕೀಯ ಅಸ್ತಿತ್ವವನ್ನು ಪಡೆದು ಬಂದವರಾಗಿದ್ದಾರೆ.

ಗೌಡ ಜನಾಂಗವನ್ನು ಅರಿತುಕೊಳ್ಳುವ ಪ್ರಯತ್ನಮಾಡಿದಾಗ ಅವರು ವಲಸೆ ಬಂದು ಕನ್ನಡ ನಾಡಿನಲ್ಲಿ ನೆಲಸಿದ ಸನ್ನಿವೇಶವೇ ಕುತೂಹಲಜನಕವಾಗಿರುತ್ತದೆ ಎಂದು ಹೇಳಲೇಬೇಕು. ತುಳುನಾಡವರು ಬಂಟರು, ಜೈನರು, ಬಂಗರು, ಅಜಿಲರು, ಬಲ್ಲಾಳರು-ಇವರೆಲ್ಲಾ ರಾಜಕೀಯ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳಲ್ಲಿ ಅತ್ಯಂತ ಬಲಿಷ್ಠರಾದುದರಿಂದ ಅವರನ್ನು ಎದುರಿಸಿ ತಮ್ಮ ನೆಲೆಯನ್ನು ಪಡೆಯುವಲ್ಲಿ ತುಳುನಾಡಿನ ಗೌಡರು ಅಸಮರ್ಥರಾದರು. ಹೆಚ್ಚಾಗಿ ಅವರು ತಮ್ಮ ಉಳಿವಿಗಾಗಿ ಬಲಿಷ್ಠರಾದ ಅವರ ಕೈಕೆಳಗೆ ಒಕ್ಕಲು ವೃತ್ತಿ ಮಾಡುತ್ತಾ ಬಂದರು, ಅವರ ಸ್ಥಾನಮಾನಗಳ ಏರಿಕೆಯಲ್ಲಿ ತಾವೇ ಬೆನ್ನೆಲುಬಾದರು. ಕಾಲಕ್ರಮೇಣ ಸ್ವಂತ ಭೂಮಿ, ಕೃಷಿ

ಮಾಡಿಕೊಳ್ಳುವಲ್ಲಿ ತುಳುನಾಡ ಗೌಡರು ಚೇತರಿಸಿಕೊಂಡರು. ಮಲೆನಾಡ ಪ್ರದೇಶದಲ್ಲಿ ವಲಸೆ ಬಂದ ಗೌಡರು ಸಹಜವಾಗಿ ವೀರವರ್ಗ. ಮಲೆವಾಸಿಗಳಾದ ಕುಡಿಯರು, ಸೋಲಿಗರು, ಇತ್ಯಾದಿ ವರ್ಗದವರನ್ನು ಸುಲಭವಾಗಿ ಸೋಲಿಸಿ ಆ ಭೂಪ್ರದೇಶಕ್ಕೆ ತಾವೇ ಒಡೆಯರಾದರು. ಇದರಿಂದ ಅವರಲ್ಲಿ ಮೊದಲಿನಿಂದಲೂ ಸಾಕಷ್ಟು ಭೂಮಿ ಉಳ್ಳವರೇ ಹೆಚ್ಚು. ವೀರವರ್ಗವಾದುದರಿಂದ ಹೊರಗಿನ ಯಾವ ಶಕ್ತಿಗಳಿಗೂ ಅವರ ಪ್ರದೇಶವನ್ನು ಆಕ್ರಮಿಸಿಕೊಳ್ಳುವಂತಾಗಲಿಲ್ಲ. ಬಯಲು ಸೀಮೆಗಳಲ್ಲಿ ನೆಲಸಿದ ಗೌಡರು ಒಕ್ಕಲಿಗರಾಗಿದ್ದು ತಮ್ಮ ಸ್ಥಾನಮಾನಗಳಿಗಾಗಿ ರಾಜಾಶ್ರಯವನ್ನು ಸಾಕಷ್ಟು ಪಡೆದು ಬಾಳಿದರು.

**ಧಾರ್ಮಿಕ ಪರಂಪರೆ :**

ಗೌಡ ಜೀವನ ಸಂಸ್ಕೃತಿಯಲ್ಲಿ ಈ ಜನಾಂಗದವರ ಸರಳ ಹಾಗೂ ಪರಿಶ್ರಮದ ಕ್ರಮಬದ್ಧ ಬಾಳಿನಲ್ಲಿ ಅಡಕವಾದ ಧಾರ್ಮಿಕ ಆಚರಣೆಗಳು, ಸಂಸ್ಕಾರ ವಿಧಿಗಳು ಅವರವರ ಪ್ರಾದೇಶಿಕ ವೈವಿಧ್ಯತೆಗಳಿಂದ ಕೂಡಿಕೊಂಡಿರುವುದನ್ನು ಗಮನಿಸಬೇಕು. ಬಯಲಸೀಮೆಯ ಗೌಡರು, ತುಳುನಾಡ ಗೌಡರು ಮತ್ತು ಮಲೆನಾಡ ಗೌಡರು ಆಯಾ ಪ್ರದೇಶಗಳ ಜನಾಂಗದವರ ಸಂಸ್ಕಾರ ಗಳಿಂದ ಪ್ರೇರಿತರಾಗಿರುವರಲ್ಲದೆ, ಹಬ್ಬದ ಆಚರಣೆಗಳಲ್ಲಾಗಲೀ, ಆಚಾರಗಳಲ್ಲಾಗಲೀ ಭಾಷಾ ಬಳಕೆಯಲ್ಲಾಗಲೀ ಮತ್ತು ವೃತ್ತಿಗಳಲ್ಲಾಗಲೀ ವಿಭಿನ್ನರಾಗಿರುತ್ತಾರೆ. ತುಳುನಾಡಿನ ಬಂಗರು, ಬಲ್ಲಾಳರು, ಅಜಿಲರು, ಬಂಟರು-ಇವರ ಪ್ರಭಾವ ತುಳುವಗೌಡರ ಮೇಲೂ, ಶೈವರು, ವೈಷ್ಣವರು ಆದ ಬ್ರಾಹ್ಮಣರ ಮತ್ತು ವೈಶ್ಯರಾದ ಸೆಟ್ಟರ ಪ್ರಭಾವ ಬಯಲು ಸೀಮೆಯ ಒಕ್ಕಲಿಗ ಗೌಡರ ಮೇಲೂ, ಕೊಡಗರ ಪ್ರಭಾವ ಕೊಡಗಿನ ಗೌಡರ ಮೇಲೂ ಸಾಕಷ್ಟಾಗಿದೆ. ದಕ್ಷಿಣ ಕನ್ನಡದ ಅರೆಭಾಷೆಯನ್ನಾಡುವ ಗೌಡರು ತಮ್ಮ ಸಹವಾಸಿಗಳಾದ ಹವ್ಯಕ ಬ್ರಾಹ್ಮಣರಿಂದ ಅನೇಕ ಧಾರ್ಮಿಕ ವಿಚಾರಗಳನ್ನು ಸ್ವೀಕರಿಕೊಂಡವರಾಗಿದ್ದಾರೆ.

ಜನ ಸಂಸ್ಕೃತಿಯ ಮೂಲದೃಷ್ಟಿ ಎಲ್ಲಾ ಗೌಡರಲ್ಲೂ ಒಂದೇ ಆಗಿರುವಾಗ ಕೆಲವು ಮೂಢನಂಬಿಕೆಗಳೂ, ಅಂದಾಚರಣೆಯೂ ಎಲ್ಲಾ ವರ್ಗದ ಗೌಡ ಜನರಲ್ಲಿ ಇಲ್ಲದಿರುವುದಿಲ್ಲ. ನಂಬಿಕೆಯೇ ದೈವೀಕತೆಯಾಗಿರುವಾಗ ಸುರೆಯ ಅರ್ಪಣೆ, ಪ್ರಾಣಿ ಬಲಿ ಮತ್ತು ಕೆಂಡ ಹಾಯುವಿಕೆ ಇತ್ಯಾದಿ ಕ್ರಮಗಳು ಗೌಡರ ಧಾರ್ಮಿಕತೆಯಲ್ಲಿ ಮೇಳವಿಸಿಕೊಂಡಿದೆ. ಸಾತ್ವಿಕ ಭಕ್ತಿಯೂ ಇಲ್ಲವೆಂದಿಲ್ಲ. ಹಬ್ಬಾಚರಣೆಗಳು ಸಾಕಷ್ಟಿವೆ. ಬಯಲ ಸೀಮೆಯ ಗೌಡರಲ್ಲಿ ಪ್ರಾದೇಶಿಕವಾದ ಸಾಂಪ್ರದಾಯಿಕ ಹಬ್ಬ ಆಚರಣೆಗಳಿದ್ದರೆ, ತುಳುನಾಡ ಗೌಡರಲ್ಲಿ ಭೂತ, ಕೋಲ, ನೇಮ ಇತ್ಯಾದಿಗಳು ನಾಡವರ ಧರ್ಮಾಚರಣೆಯಿಂದ ಸೇರಿಕೊಂಡದ್ದಾಗಿದೆ. ಮಲೆನಾಡ ಗೌಡರಲ್ಲಿ ದೈವ (ಭೂತ) ದೇವಿ (ಸಿರಿ) ಪೂಜೆಗಳೂ, ಹರಿಸೇವೆ(ಹರ್ಸಯ) ಹರಿಕೆ ಸಂಪ್ರದಾಯಗಳು ವಿಶಿಷ್ಟ ರೀತಿಗಳಿಂದ ಮೈವೆತ್ತು ಬಂದಿದೆ. ದಕ್ಷಿಣ ಕನ್ನಡದ ಗೌಡರಿಗೆ ನಾಡಿನ ಶಕ್ತಿಗಳಾದ ಕಲ್ಲುರ್ಟಿ (ಪಾಷಾಣಮೂರ್ತಿ) ವಿಷ್ಣು ಮೂರ್ತಿ, ಗುಳಿಗ, ನಾಗ-ಇವೇ ಮೊದಲಾದ ದೈವಗಳಲ್ಲಿ ನಂಬಿಕೆ ಹೆಚ್ಚು. ಇವೆಲ್ಲವೂ ಅಂಧಾಚರಣೆಗಳೆನಿಸಿದರೂ ಶುದ್ಧಬಾವದ ಭಕ್ತಿ, ಜನಾಂಗ ಜೀವಾಳವೆನಿಸಿ ಅವರ ಬದುಕಿಗೆ ಬಲವಾಗಿ ಉಳಿದು ಬಂದಿದೆ. ಒಟ್ಟಿನಲ್ಲಿ ಸೃಷ್ಟಿ, ಪಾಲನೆ ಮತ್ತು ಲಯಕಾರಕನಾದ ಏಕಶಕ್ತಿಯನ್ನು ನಾನಾ ಮುಖಗಳಿಂದ ಒಲಿಸಿ ಬಾಳುವ ಧಾರ್ಮಿಕ ಛಲ ಗೌಡ ಜನಾಂಗದವರದ್ದಾಗಿದೆ. ಈ ಪರಂಪರೆಯಲ್ಲಿ ಮುಂದುವರಿದು ಬಂದಂತೆಯೇ ಪೂಜಾ ವಿಧಿ ವಿಧಾನಗಳೂ ಮೂಡಿ ಬಂದಿವೆ. ಸಾಮಾಜಿಕವಾಗಿ ಆಚರಿಸುವ ಎಲ್ಲಾ ಧಾರ್ಮಿಕ ವಿಧಿಗಳಲ್ಲಿ ಗೌಡರಿಗೆ ಊರು ಗೌಡನೇ ದೈವಜ್ಞ, ಮುಖಂಡ ಮತ್ತು ಊರವರ ಪ್ರತಿನಿಧಿ ಆಗಿರುತ್ತಾನೆ.

**ಕನ್ನಡನಾಡಿನ ಗೌಡ ಜನಾಂಗ ನಾಡ ಹಬ್ಬಗಳನ್ನು ಆಚರಿಸುತ್ತಿರುವರಾದರೂ ಕೆಲವೊಂದು ವಿಶಿಷ್ಟ ಹಬ್ಬಗಳೂ ಇಲ್ಲದಿಲ್ಲ. ಪ್ರಕೃತಿ ಜೀವಿಗಳಾದ ಮಣ್ಣಿನ ಮಕ್ಕಳಾದ ದಕ್ಷಿಣ ಕನ್ನಡ ಜಿಲ್ಲೆಯ ಗೌಡರು ನಡೆಸುವ ಪ್ರಕೃತಿ ಪೂಜೆಯೇ'ಖೆಡ್ಡಾಸ'** ಭೂಮಿ ತಾಯಿ (ಪ್ರಕೃತಿ ಮಾತೆ) ವಸಂತ ಋತುವಿನಲ್ಲಿ ಫಲಭರಿತಳಾಗಲು ಶುಭ ಚಿಹ್ನೆ ತೋರಿಬಂದಾಗಲೇ ಈ ಹಬ್ಬದ ಆಚರಣೆ. ಆ ದಿನ ನೆಲ ಅಗೆದರೂ, ಮರ ಕಡಿದರೂ ಪ್ರಕೃತಿ ಮಾತೆ ನೋಯುವಳೆಂಬ ಭಾವನೆ ಇರುವುದರಿಂದಲೇ ಅಂದು ಎಲ್ಲಾ ದುಡಿಮೆಗೆ ಬಿಡುವು. ಈ ಸಂತೋಷಾರ್ಥವಾಗಿ ಬೇಟೆ, ಹಬ್ಬದೂಟಗಳಲ್ಲಿ ಜನಾಂಗದವರೆಲ್ಲರೂ ಮನೆ ಮನೆಗಳಲ್ಲಿ ಮೈಮರೆಯುತ್ತಾರೆ. ವಿಷು(ಬಿಸು) ಸಂಕ್ರಾಂತಿಯೇ ಈ ಜನಾಂಗದವರ ವರ್ಷಾರಂಭ ಕಾಲ.

ಗೌಡ ಜನಾಂಗದವರ ಧಾರ್ಮಿಕ ಪರಂಪರೆಯಲ್ಲಿ ಅಸಾಮಾನ್ಯ ದೈವೀಶಕ್ತಿಯ ಆರಾಧನೆ ಬೇರೆ ಬೇರೆ ರೀತಿಗಳಿಂದ ಕಂಡು ಬಂದರೂ, ಮುಖ್ಯವಾಗಿ ಉತ್ತಮ ಮಾನವ ನಡವಳಿಕೆಯೇ ಧರ್ಮ ಎಂದು ತಿಳಿದೇ ನಡೆದು ಬಂದಿದ್ದಾರೆ ಎಂಬುದು ವಿದಿ ಸತ್ಯ, ನ್ಯಾಯ, ಧರ್ಮ, ದಯೆ ಮತ್ತು ಪರೋಪಕಾರ ಬುದ್ಧಿ ಊರ ಹಿರಿಯರ ನ್ಯಾಯ ತೀರ್ಮಾನಗಳಲ್ಲಿ ವ್ಯಕ್ತವಾಗುತ್ತಿತ್ತು. ಉದಾತ್ತ ಮಾನವ ಗುಣಗಳನ್ನು ಜನಾಂಗದಲ್ಲಿ ಬಿತ್ತಿ ಬೆಳೆಯುವ ಹಿರಿತನದ ಸಿರಿವಂತಿಕೆ ಈ ಜನಾಂಗದ ಜನಗಳದ್ದು. 'ಸರ್ವೇ ಜನಾ ಸುಖಿನೋ ಭವಂತು' ಎಂಬ ಉದಾತ್ತ ಮಾನವ ಧರ್ಮದ ಧ್ಯೇಯ ಈ ಜನಾಂಗದ ಜೀವಾಳವೆನಿಸಿದೆ. ತಪ್ಪುಗಳನ್ನು ತಿದ್ದಿ, ಒಪ್ಪುಗಳನ್ನು ಸ್ವೀಕರಿಸಬೇಕಾದ ಧರ್ಮ ಗೌಡ ಜನಾಂಗದ ಧರ್ಮ.

**ಭಾಷಾ ಪರಂಪರೆ:**

ಭಾಷೆಯೆಂಬುದು ವ್ಯಕ್ತಿಯ ವ್ಯಕ್ತಿನಿಷ್ಠ ಹಾಗೂ ಸಾಮೂಹಿಕ ಜೀವನಾನುಭವ ಮತ್ತು ವಿಚಾರಗಳ ಅಭಿವ್ಯಕ್ತಿ ಮಾಧ್ಯಮ. ತುಳುನಾಡ ಗೌಡರಾಡುವ ತುಳು ಭಾಷೆಯಾಗಲೀ, ಬಯಲು ಸೀಮೆಯ ಗೌಡರಾಡುವ ಕನ್ನಡವಾಗಲೀ ದ್ರಾವಿಡ ಮೂಲದಿಂದ ಬಂದದ್ದು ಎಂಬುದರಲ್ಲಿ ಸಂದೇಹವಿಲ್ಲ. ಒಟ್ಟಿನಲ್ಲಿ ಅವು ಆಯಾ ಪ್ರದೇಶಗಳ ಇತರ ವರ್ಗದವರೂ ಆಡುವ ಭಾಷೆಗಳಾಗಿದ್ದು ಪ್ರಾದೇಶಿಕ ವೈಶಿಷ್ಟ್ಯವನ್ನು ಪಡೆದವುಗಳಾಗಿವೆ. ಆದರೆ ದಕ್ಷಿಣ ಕನ್ನಡದ ಸುಳ್ಯ ಮತ್ತು ಅದರ ಸುತ್ತಲ ಪ್ರದೇಶದ ಹಾಗೂ ಕೊಡಗಿನ ಭಾಗದ ಗೌಡರು ಆಡುವ "ಅರೆ ಭಾಷೆ "ಯು ಗೌಡ ಜನಾಂಗ ವಿಶಿಷ್ಟವಾಗಿ ಕನ್ನಡ ಭಾಷೆಯ ಮೂಲರೂಪ ಸತ್ವಗಳನ್ನು ಹೊಂದಿದೆ. ಈ ಗೌಡ ಕನ್ನಡವೇ ಭಾಷಾ

**ಖೆಡ್ಡಾಸ ಹಬ್ಬವು ಅರೆಭಾಷೆ ಗೌಡರ ಸಾಂಸ್ಕೃತಿಕ, ಧಾರ್ಮಿಕ ಹಿನ್ನಲೆಯುಳ್ಳ ವಿಶಿಷ್ಟ ಹಬ್ಬವಾಗಿದೆ**

ಪರಂಪರೆಯಲ್ಲಿ ಉಳಿದು ಬಂದಿರುವ ಗೌಡ ಜನಾಂಗದ ಅಮೂಲ್ಯ ಸೊತ್ತು. ಗೌಡ ಜನಾಂಗ ಜೀವಾಳವಾದ ಆಡುಮಾತಿನ ಈ ಗೌಡ ಕನ್ನಡವು ಕನ್ನಡ ಭಾಷೆಯ ಮೂಲ ವೈಭವ ಸಂಪನ್ನತೆ ಯಿಂದ ಕೂಡಿಕೊಂಡಿರುವುದನ್ನು ಗಮನಿಸಬೇಕಾಗಿದೆ. ಗೌಡ ಕನ್ನಡದಲ್ಲಿ ಪ್ರಾದೇಶಿಕ ವೈವಿಧ್ಯತೆ ಸಾಕಷ್ಟು ಇರುವುದಾದರೂ ಈ ಜನಾಂಗದವರ ಅನುಭವ, ಬುದ್ಧಿ, ವಿಚಾರಗಳನ್ನು ಅಭಿವ್ಯಕ್ತಿಸುವ ಶಬ್ದ ಸಂಪತ್ತು, ವ್ಯಾಕರಣ, ಗಾದೆ, ಒಗಟು ಮತ್ತು ಕಥೆಗಳು ಸಾಕಷ್ಟಿವೆ.

ಆದರೆ ಸೋಬಾನೆ ಹಾಡುಗಳು ಮಾತ್ರ ಪ್ರಬುದ್ಧ ಗ್ರಾಂಥಿಕ ಕನ್ನಡದಲ್ಲೇ ರೂಢಿಯಲ್ಲಿರುವುವು. ಕನ್ನಡ ಭಾಷಾಭಿಮಾನಿಗಳಿಗೆ ಗೌಡ ಕನ್ನಡದ ಪರಿಚಯ ಅತೀ ಅವಶ್ಯ.

ಕನ್ನಡ ಭಾಷೆಯ ಬೆಳವಣಿಗೆಯಾದಂತೆಯೇ ಅದರ ಶಬ್ದಗಳು ಅರ್ಥ ವ್ಯತ್ಯಾಸವಾದುದು ಸ್ಪಷ್ಟ. ಗೌಡ ಕನ್ನಡದಲ್ಲೂ ಈ ರೀತಿಯ ವ್ಯತ್ಯಾಸವಾಗಿದೆ. ಜೀವಂತ ಭಾಷೆಯಾದ ಕನ್ನಡಕ್ಕೆ ಸುಮಾರು 20 ಸಾವಿರ ವರ್ಷ ಮೇಲ್ಪಟ್ಟ ಇತಿಹಾಸದ ಹಿನ್ನೆಲೆಯಿದ್ದು ಹಳೆಗನ್ನಡದ ಜೊತೆಯಲ್ಲೇ ಆಡುಮಾತಾಗಿ




ಬೆಳೆದು ಬಂದ ಗೌಡ ಕನ್ನಡದಲ್ಲೂ ಶಬ್ದಾರ್ಥ ವ್ಯತ್ಯಾಸಕ್ಕೆ ಉದಾಹರಣೆ ಈ ರೀತಿಯಾಗಿವೆ.

ಕಟೆ-ಸಾಯು-ಕಳಿ=ಹಣ್ಣಾಗು

ಬಾಳ್=ಬಾಳುವೆ ಬಾಳ್=ಕತ್ತಿ

ಬಟೆ=ವಂಶ, ಗೋತ್ರ, ಬಳಿ=ಹತ್ತಿರ

ಅಟೆ=ಬಂಡೆ, ಅರೆ=ಅರ್ಧ

ಬಟೆ=ದಿಣ್ಣೆಯ ಬದಿ, ಬರೆ=ಗೆರೆ

ಕಟೆ=ಕಲೆ, ಕರೆ=ಅಂಚು, ಬದಿ, ಕರೆಯು

ಹನ್ನೆರಡನೇ ಶತಮಾನಕ್ಕೂ ಮೊದಲೇ ಕನ್ನಡ ಭಾಷೆಯಿಂದ ಱಟ (ಟ) ಮತ್ತು ಶಕಟರೇಫ(ಱ)ಗಳು ಮಾಯವಾಗಿ ಅವುಗಳ ಅರ್ಥವನ್ನೂ ಅವುಗಳ ಸಮಾನಪದಗಳು ಹೊಂದಿವೆ. ಈ ದೃಷ್ಟಿಯಿಂದ **ಗೌಡ ಕನ್ನಡವು ಮೂಲತಃ ಅಟೆಗನ್ನಡ ಅಂದರೆ ಬಂಡೆ ಸಮಾನ ದೃಢವಾದ ಮೂಲ ಕನ್ನಡ ಎಂದು ಹೆಸರಿಲ್ಪಟ್ಟಿತ್ತಾದರೂ ಆ ಬಳಿಕ 'ಅರೆಗನ್ನಡ'ವೆಂದೂ 'ಅರೆಬಾಸೆ'ಯೆಂದೂ ಕರೆಯಲಾಯ್ತು.** ಹೀಗಿದ್ದರೂ 'ಅರೆ' ಅಂದರೆ ಬಂಡೆ ಎಂಬ ಅರ್ಥವನ್ನೇ ಹೊಂದಿದೆ. ('ಕನ್ನಡ ತಾಯ್ ನೋಟ'ದಲ್ಲಿ ದಿ||ಬಿ. ಎಂ. ಶ್ರೀಯವರ ಪ್ರಯೋಗ, ಹೊಸಗನ್ನಡ ದಲ್ಲಿ 'ಕಲ್ಲು ಹೂವಿಡಿದರೆಯ ಮೇಲೆ) ಆದರೆ ಅರೆ=ಅರ್ಧ ಎಂಬ ಅರ್ಥವಿರುವಾಗಲೂ ಈ ಗೌಡ ಜನಾಂಗ ವಿಶಿಷ್ಟ ಭಾಷೆಗೆ ಗೌಡ ಕನ್ನಡವೇ ಸೂಕ್ತ ಎಂದು 1952ರಲ್ಲಿ ಹೆಸರಿಡಲಾಗಿದೆ. (ದಿ|| ಎಂ. ಮರಿಯಪ್ಪ ಭಟ್ಟರಿಂದ) ಇದು ಅರ್ಧ ಕನ್ನಡ ಅಲ್ಲ. ಕಲ್ಲು ಬಂಡೆ ಭಾಷೆಯೂ ಅಲ್ಲ. ಯಾಕೆಂದರೆ ಇದು ಬದಲಾಗುತ್ತಾ ಇದೆ. ಕನ್ನಡ ಭಾಷೆಯ ಅರ್ಧರೂಪವೇ ಅಲ್ಲ, ಪೂರ್ಣ ರೂಪವೇ ಆದರೆ ಮೂಲ ರೂಪದಲ್ಲಿದೆ, ಆಡು ಮಾತಾಗಿದೆ.

**(ಅ) ಗೌಡ ಕನ್ನಡ ಭಾಷೆ ಅಕ್ಷರಗಳು:**

ಸಂಸ್ಕೃತ ಭಾಷೆಯ ಸುಗ್ಗಿಯಲ್ಲಿ ಕನ್ನಡ ಭಾಷೆ ಬೆಳೆದು ಬಂದಿರುವಾಗ ಆ ಭಾಷೆಯ ಅಕ್ಷರಗಳನೇಕ ಕನ್ನಡಕ್ಕೆ ಸೇರಿವೆ. ಆದರೆ ಅಚ್ಚಗನ್ನಡದಲ್ಲಿ ಇದ್ದಂತೆಯೇ ಗೌಡ ಕನ್ನಡದಲ್ಲೂ 34 ಅಕ್ಷರಗಳು ಇದ್ದು ಈಗ ಕೇವಲ 32 ಅಕ್ಷರಗಳಿರುವುವು.

ಅವುಯಾವುವೆಂದರೆ:- ಸ್ವರಗಳು : ಅ ಆ ಇ ಈ ಉ ಊ ಎ ಏ ಒ ಓ-10

ವ್ಯಂಜನಗಳು: ವರ್ಗೀಯ : ಕ ಗ ಙ, ಚ ಜ ಞ,ಟ,ಡ,ಣ ತ ದ ನ, ಪ ಬ ಮ -15

ಅವರ್ಗೀಯ: ಯ ರ ಲ ವ ಸ ಹ ಳ-7

(ಟ (ಱಟ) ಮತ್ತು ಱ (ಶಕಟರೇಫ)ಗಳು ಈಗ ಕನ್ನಡದಲ್ಲೂ. ಗೌಡ ಕನ್ನಡದಲ್ಲೂ ಪ್ರಯೋಗದಲ್ಲಿಲ್ಲ.)

ಗೌಡ ಜನಾಂಗ ವಿಶಿಷ್ಟತೆಯನ್ನು ಪಡೆದ ಗೌಡ ಕನ್ನಡದಲ್ಲಿ ಈ 32 ಅಕ್ಷರಗಳಿಂದಲೇ ವ್ಯವಹಾರ ನಡೆದಿತ್ತು. ಇನ್ನೂ ನಡೆಯಲೂ ಬೇಕು. ಇದಕ್ಕಿಂತ ಹೆಚ್ಚಿನ ಯಾವ ಅಕ್ಷರಗಳ ಶಬ್ದಗಳು ಈ ಕನ್ನಡಕ್ಕೆ ಸೇರಿಕೊಂಡಾಗ ಅವು ಅನ್ಯದೇಶ್ಯಗಳು ಎಂಬ ವಿಚಾರ ಎಲ್ಲರೂ ತಿಳಿದಿರಲಿ!

ಐ ಔಗಳಿಲ್ಲದೆ ಗೌಡ ಕನ್ನಡದ ಶಬ್ದರೂಪ ಹೀಗಿದೆ ಉದಾ:ಗವುಡ, ಹವುದ್, ಅಯ್ದ್, ಅಯ್ಬುತ್ತ್, ಕಯ್, ಮಯ್, ಇತ್ಯಾದಿ.

ಗೌಡ ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳಿಲ್ಲದೆ, ಅಚ್ಚಗನ್ನಡದ ಅಲ್ಪಪ್ರಾಣಾಕ್ಷರಗಳ ಬಳಕೆಯಿಂದಾಗಿ ಸಂಸ್ಕೃತದ ತತ್ಭವ ರೂಪಗಳೇ ಇರುವುವು.

ಉದಾ: ಭಾಷೆ- ಬಾಸೆ, ವಿಷ-ವಿಸ, ಗರ್ಭ-ಗಬ್ಬ, ಆಕಾಶ-

ದೇಶದ ನಾನಾಜತನಾಂಗದಂತೆ ಹತ್ತು ಕುಟುಂಬವೂ ಸಹ ಒಂದು ವಿಶಿಷ್ಟ ಪಂಗಡ

ಆಕಾಸ, ಪಾಷಾಣ-ಪಾಸಾಣ, ಶಿವ-ಸಿವ, ಭಯ-ಬಯ, ಶಾಲೆ-ಸಾಲೆ, ಝಳ-ಜಳ ಇತ್ಯಾದಿ ಉಚ್ಚಾರದಲ್ಲೂ ಮಹಾಪ್ರಾಣಾಕ್ಷರಗಳಿಲ್ಲ. ಉದಾ : ಕಸ್ಟ, ಇಸ್ಟ ಇತ್ಯಾದಿ.

ಅನುಸ್ವಾರ (೦) ಮತ್ತು ವಿಸರ್ಗ (ಃ)ವಿಲ್ಲದೆ ಗೌಡ ಕನ್ನಡ ಶಬ್ದಗಳು. ಉದಾ: ಖಂಡಿತ,- ಕಣ್ಡಿತ, ಅಂದರೆ- ಅನ್ದರೆ, ಸಂಬಂಧ-ಸಮ್ಬನ್ದ, ಶಂಕರ-ಸನ್ಕರ, ದುಃಖ- ದುಕ್ಕ, ಪುನಃ -ಪುನ.

ಅನುನಾಸಿಕಾಕ್ಷರಗಳ ಸ್ಪಷ್ಟ ಬಳಕೆ ಗೌಡ ಕನ್ನಡದಲ್ಲಿದೆ. ಉದಾ:ಮಙ(=ಮಗ) ಹಞ=ಸ್ವಲ್ಪ, ಕುಞ=ಮರಿ, ಮಞ್ಚಿ=ಮಂಚ, ಬಙ=ಭಂಗ, ಕಷ್ಟ, ಮಙಣೆ=ಒಯ್ಯಾರ, ಇತ್ಯಾದಿ.

(ಆ) ಗೌಡ ಕನ್ನಡದಲ್ಲಿ ಹಳಗನ್ನಡದ ಶಬ್ದಗಳೇ ಹೆಚ್ಚು.

ಉದಾ: ಹಯಿದ (=ಹುಡುಗ), ಗೂಡೆ(= ಹುಡುಗಿ), ಗಡ(=ಅಂತೆ), ಅಡಗು(=ಅಡಗು), ಬೆಳಂತಿಗೆ(=ಬೆಳ್ತಿಗೆ), ಕೂಸು (=ಮಗು), ಇಕ್ಕ್ (=ಇಡು), ಕಿಚ್ಚಿ (=ಬೆಂಕಿ), ಬನ, ವಲ್ಲಿ, ಓಲೆ, ಹಿಂಬೊತ್ತು, ಕುರ್ಲೆ, ಪಿಳ್ಳೆ, ಚಕ್ಕಳ, ಹಡಪ, ಸೇಸೆ, ಹಸೆ, ವೀಳ್ಯ, ಕೊತ್ತಿ, ಸೆರೆ(=ನರ), ಹುಗ್ಗೆ (=ಅನ್ನ) ಹೊತ್ತು ನರ್ಗುಳಿ (=ನುರಿಯುವ ಕುಳಿ). ಕೊಂಡಾಟ, ಗೇಳ್ಸ್ (= ಗೆಣಸು), ಮುರುನ್ಬು, ಸುರುನ್ಬು, ಉಣ್, ತಿನ್, ಆಡ್, ಮಾಡ್, ನಿಲ್, ನಾಣ್ ಇತ್ಯಾದಿ.

(ಇ) ಆಡು ಮಾತಾದ ಗೌಡ ಕನ್ನಡದ ಲಕ್ಷಣಗಳಲ್ಲಿ ಸೌಲಭ್ಯಾಕಾಂಕ್ಷೆಯು ಮುಖ್ಯ. ಸೌಲಭ್ಯಾಕಾಂಕ್ಷೆಯಿಂದ ಹಳಗನ್ನಡದ ಪದಗಳು ಗೌಡ ಕನ್ನಡದಲ್ಲಿ ಹೊಂದಿದ ರೂಪಗಳಿಗೆ ಉದಾ : ಮಗಳ್-ಮಗ, ಮಕ್ಕಳ್ - ಮಕ್ಕ, ಊರ್ಗ್ಳ್ - ಊರ್ಗ, ನೀನ್-ನೀ, ಅವನ್ -ಅವ, ಇವರ್ -ಇವ್, ಅವರ್- ಅವ್. ಎಲುವು-ಎಲು, ಬೇಯಿಸು -ಬೇಸ್. ಹೋಯಿತು-ಹೋತ್, ಬಂತು-ಬಾತ್. ಆಯಿತ್-ಆತ್, ಹೋಗುತ್ತೆನೆ-ಹೋನೆ, ಬರುತ್ತೇನೆ-ಬನ್ನೆ, ಬರಬೇಕೊ-ಬರೋಕೊ? ಹಾಗಾದರೆ-ಹನ್ಗಾರೆ, ಹೀಗಾದರೆ-ಹಿನ್ಗರೆ, ಆಗುವಾಗ-ಆಕಾನ, ತರುವಾಗ-ತಾಕಾನ, ತರಲಿಕ್ಕೆ -ತಾಕೆ, ಕೊಡಲಿಕ್ಕೆ-ಕೊಡಿಕೆ, ಕಾಣಲಿಕ್ಕೆ-ಕಾಮ್ಬಕೆ, ಸೊರ್ಕು-ಸೊಕ್ಕು, ಮರಳು-ಮರ್ಳ್, ಬೆರಳು - ಬೆರ್ಳ್, ಉರುಳು-ಉರ್ಳು, ಹೆದರು-ಹೆದ್ರ್, ಕುಳಿತುಕೋ - ಕುದ್ರು, ಎದ್ದೇಳು-ಎದ್ರ್, ಉಂಟ್ರು - ಉಟ್ಬು, ತಿನ್ನುವಿಕೆ-ತಿನಟ, ಉಣ್ಣುವಿಕೆ-ಉಣಟ, ಆಡುವಿಕೆ - ಆಡಟ - ಇತ್ಯಾದಿ, ಹೀಗೆ ನೇರವಾಗಿ ಕ್ರಿಯಾಧಾತುಗಳಿಗೆ ಪ್ರತ್ಯಯ ಸೇರಿಕೊಂಡು ಮತ್ತು ನಾಮಪ್ರಕೃತಿಗಳ ಅಂತ್ಯಾಕ್ಷರಗಳು ಲೋಪವಾಗುವ ವಿಶಿಷ್ಟತೆಯನ್ನು ಗೌಡ ಕನ್ನಡದಲ್ಲಿ ಗುರುತಿಸಬಹುದು. ಅಲ್ಲದೆ ಈ ರೀತಿಯ ಸೌಲಭ್ಯಾಕಾಂಕ್ಷೆಯನ್ನು ಗೌಡ ಕನ್ನಡದ ಗ್ರಾಮ್ಯರೂಪದ ಪದಗಳಲ್ಲೂ ಗುರುತಿಸಬಹುದು. ಉದಾ: ಗ್ರಹಚಾರ- ಗ್ರಾಚಾರ, ಸ್ವರೂಪ-ಸುರ್ಪ, ತುಪ್ಪಳ-ತೊಪ್ಪು, ಅಹಂಕಾರ-ಹಂಕಾರ, ಬೆವರ್-ಬೇಗ್ರ್, ತುಳಸಿ-ತೊಳ್ಸಿ, ಮುಸುಡು-ಸೊಡ್ನು, ಮನುಷ್ಯ-ಮಯಿಸ, ಇತ್ಯಾದಿ.

(ಈ) ಗೌಡ ಕನ್ನಡದಲ್ಲಿ ಸ್ತ್ರೀಲಿಂಗವಿಲ್ಲ, ಮಧ್ಯ ಮತ್ತು ಉತ್ತರ ದ್ರಾವಿಡ ಭಾಷೆಗಳ ವರ್ಗಕ್ಕೆ ಸೇರಿದ ಈ ಕನ್ನಡದಲ್ಲಿ ಸ್ತ್ರೀಲಿಂಗವೂ ನಪುಂಸಕ ಲಿಂಗವಾಗಿಯೇ ಇರುವುದು ಮಧ್ಯಮ ಪುರುಷ ಏಕ ವಚನದಲ್ಲಿ ಮಾತ್ರ ಪುಲ್ಲಿಂಗರೂಪವನ್ನು ಗುರುತಿಸಬಹುದು.

ಉದಾ :- ಅದ್=ಅದು, ಅವಳು, ಇದ್=ಇದು, ಇವಳು, ಅವ್=ಅವು, ಅವರು ಇವ್=ಇವು, ಇವರು.

ಮಧ್ಯಮ ಪುರುಷ ಬಹುವಚನದಲ್ಲಿ ಮಾತ್ರ ಬಹುವಚನ ಪ್ರತ್ಯಯ 'ಇರ್ - ಇದ್ದು ಉಳಿದೆಡೆಯೂ ನಪುಂಸಕಲಿಂಗ ವಾಚೀ ಪ್ರತ್ಯಯ ಏಕವಚನದಲ್ಲಿ 'ಅದೆ' ಮತ್ತು ಬಹುವಚನದಲ್ಲಿ 'ಅವೆ' ಸೇರಿಕೊಳ್ಳುತ್ತದೆ.

ಉದಾ:- ಬನ್ದದೆ= ಬರುತ್ತಾನೆ. ಬರುತ್ತಾಳೆ, ಬರುತ್ತದೆ. ತನ್ದದೆ=ತರುತ್ತಾನೆ, ತರುತ್ತಾಳೆ, ತರುತ್ತದೆ, ನೋಡ್ವೆ = ನೋಡುತ್ತಾರೆ, ನೋಡುತ್ತವೆ, ನೋಡುತ್ತೇವೆ. ಬನ್ದರಿ=ಬಂದಿರಿ, ಬಾಪೂರಿ=ಬರುವಿರಿ. ಬನ್ದೊ=ಬಂದರು, ಬಂದುವು. ನೋಡಿನೆ=ನೋಡತ್ತೇನೆ ಇತ್ಯಾದಿ.

(ಉ) ಗೌಡ ಕನ್ನಡವು ಬೆಳೆಯುತ್ತಾ ಇದೆ ಎಂಬುದಕ್ಕೆ ಈ ಭಾಷೆಗೆ ಸೇರಿಕೊಂಡ ಇತರ ಭಾಷೆಗಳ ಪದಗಳು (ಅನ್ಯದೇಶಿಯ)ಗಳು ಸಾಕ್ಷಿ.

ಉದಾ:- ಪೊರ್ಲು, ಪೋಯಿ, ಅಂಬೇರ್ಪು, ಬೊಳ್ಚು (ತುಳು)

ಪೊಯಿಂಟ್, ಪ್ಲೋಟ್, ಸ್ಲೇಟ್, ಕಾರ್ (ಇಂಗ್ಲಿಷ್)

ಅಕಲ್, ಕುಶಾಲ್, ಕೊಮ್ಬರೆ(ಕಮರೆ)

ಕುಡ್ತ(ಕುರ್ತ) - (ಹಿಂದುಸ್ಥಾನಿ,)

ಭಾಷೆ, ವಿದ್ಯೆ, ಬುದ್ಧಿ, ಶುದ್ಧಿ, ಧರ್ಮ, ನ್ಯಾಯ - (ಸಂಸ್ಕೃತ)

(ಊ) ಗೌಡ ಕನ್ನಡದ ಅನೇಕ ಗಾದೆಗಳು ಜನಾಂಗ ಜೀವಾಳವಾದ ಅನುಭವ-ವಿಚಾರಗಳನ್ನು ಹೊರ ಹೊಮ್ಮಿಸುತ್ತವೆ.

ಉದಾ:- "ಅತ್ತೆ ಮೇಲೆನ ಸಿಟ್ಟ್ ಕೊತ್ತಿ ಮೇಲೆ" (ಕಾರಣ, ನೆವ). (ಅತ್ತೆಯ ಮೇಲಿನ ಕೋಪ ಬೆಕ್ಕಿನ ಮೇಲೆ).'ಬೆಂದದ್ ಬಾಯಿಗೆ ಹಳ್ಸಿದ್ ನಾಯಿಗೆ' (ಪರಿಣಾಮ). (ಬೆಂದದ್ದು ಬಾಯಿಗೆ ಹಳಸಿದ್ದು ನಾಯಿಗೆ). 'ಅದ್ರದೆ ಉದ್ರೊಕು? (ಅನುಭವ). (ಕಷ್ಟಪಡದೆ ಇಷ್ಟ ದೊರೆಯಬೇಕು?). 'ಕುರೆ ಸತ್ತ ಕೊರ್ಮ್ಬನ ಹಾನ್ಗೆ -(ಅಸಹಾಯಕತೆ). (ಕೋತಿ ಸತ್ತ ಕೋಮಟಿಗನ ಹಾಗೆ)- ಇತ್ಯಾದಿ. ಹೀಗೇ ಒಗಟುಗಳು (ಒಡ್ಪುವ ಕತೆ)ಗಳು ಬುದ್ಧಿ ಪ್ರಚೋದಕವಾಗಿ ಗೌಡ ಕನ್ನಡದಲ್ಲಿ ಸಾಕಷ್ಟಿವೆ.

**ಪರಂಪರೆಯ ಜೀವಂತಿಕೆಯಿಂದ ಕೂಡಿ ಪರಂಪರೆಯಲ್ಲಿ ಆಳವಾಗಿ ಬೇರು ಬಿಟ್ಟ ಗೌಡ ಜನಾಂಗ ವೃಕ್ಷ ಹೆಮ್ಮರವೇ ಸರಿ. ಇಂತಹ ಜನಾಂಗ ವೃಕ್ಷದ ಬೇರುಗಳೆಲ್ಲಾ ಬಹಳ ಹಳೆಯದಾದರೂ ಇಂದಿನ ಜನಾಂಗದ ಹೊಸ ಚಿಗುರಾದ ನವಚೇತನಗಳು ವೃಕ್ಷದ ಸೊಬಗನ್ನು ಕೆಡಿಸುವಂತಾಗಬಾರದು. ಗೌಡ ಜನಾಂಗ ಜೀವಾಳವನ್ನರಿತು, ಉಳಿಸಿ, ಬೆಳೆಸುವ ಸೊಗಸುಗಾರರಾಗಬೇಕು. ಆಗಲೇ ಈ ಜನಾಂಗದ ಬೃಹತ್ತಿನ ಸುರಕ್ಷೆಸಾಧ್ಯ. ವಿಚಾರವಿಹೀನ ಅಂಧಾನುಕರಣೆ ಇಂದಿನ ಗೌಡರಿಂದ ಖಂಡಿತಾ ಆಗಬಾರದು.**

---

ಅರೆಭಾಷೆ ಗೌಡರಿಗೆ ಪುರಾತನ ಚರಿತ್ರೆ ಇದೆ

---

# ಇಂಜಿನಿಯರ್ ಪದವೀಧರ ಪಳಂಗೋಟು ಎಸ್. ಜಯಪ್ರಕಾಶ್



ಮದೆನಾಡ್‌ಲಿ ಒಂದ್ ಹೈಸ್ಕೂಲ್ ಆದ ಮೇಲೆ ಸಾಕಷ್ಟ್ ಮಕ್ಕ ಒಳ್ಳ ವಿದ್ಯಾವಂತರಾಗೊಳೊ. ಬುದ್ಧಿವಂತರಾಗೊಳೊ. ಅಲ್ಲಿ-ಇಲ್ಲಿ ಒಳ್ಳೊಳ್ಳ ಚಾಕರಿಲೂ ಒಳೊ. (ಎಲ್ಲವೂ ಅಲ್ಲ-ಅದು ಸಾಧ್ಯನೂ ಇಲ್ಲೆ. ಯಾಕೆಂತೇಳಿರೆ ನಮ್ಮ ಕೈ ಬೆರಳ್ ಎಲ್ಲ ಸಮಾ ಇಲ್ಲೆ ನೋಡಿ!) ಅದಿರ್‍ಲಿ, ಈ ಹೈಸ್ಕೂಲ್‌ಲಿ ಓದಿದ ಒಬ್ಬ ಹೈದ ಇಂಜಿನಿಯರ್ ಪದವೀಧರ ಆಗುಟುಂತೇಳ್ವ ಒಳ್ಳ ಸುದ್ದಿ.

ಮದೆನಾಡ್‌ನ ಪಳಂಗೋಟು ಶ್ರೀ ಸುಬ್ಬಯ್ಯ ಮತ್ತೆ ಶ್ರೀಮತಿ ಸೋಮಾವತಿ ಇವರ ಕಡೇ ಕೂಸು ಜಯಪ್ರಕಾಶ್ ಇದೇ ಹೈದ ಇಂಜಿನಿಯರ್ ಪದವೀಧರ. ಅಪ್ಪ ವಿದ್ಯಾದೇಗುಲದ ಮೆಟ್‌ಹತ್ತಿತ್‌ಲೆ. ಆದರೆ ಮಕ್ಕಳ ಮಾತ್ರ ಓದುವಷ್ಟ್ ಓದಿಸಿನೇಂತೇಳುವ ದೊಡ್ಡಗುಣ ಅವರ್‌ದ್. ಹಂಗಾಗಿ ಜಯಪ್ರಕಾಶ್‌ನ ಇಬ್ಬರು ಅಣ್ಣಂದರ್ ಪದವೀಧರರ್. ಸಧ್ಯಕ್ಕೆ ಮನೇಲೇ ಒಳೊ. ಒಬ್ಬು ಅಕ್ಕನ ಮರುಗೋಡು ಪಾಂಡನ ಶ್ರೀ ಚಂದ್ರಶೇಖರ್‌ಗೆ ಮದುವೆಮಾಡಿ ಕೊಟ್ಟೊಳೊ.

ಜಯಪ್ರಕಾಶ್ ತನ್ನ ಪ್ರಾಥಮಿಕ ವಿದ್ಯಾಭ್ಯಾಸನ ಬೆಳಕುಮಾನಿ ಸ್ಕೂಲ್‌ಲಿ ಮಾಡ್ತ್. ಮದೆ ಮಹೇಶ್ವರ ಹೈಸ್ಕೂಲ್‌ಲಿ 10ನೇ ಮುಟ್ಟ ಓದಿ ಶೇ 71 ಅಂಕತಕ್ಕಂಡ್ ಮೇಲೆ ಬಾತ್. ಅಲ್ಲಿಂದ ಸುಳ್ಯದ ಶ್ರೀ ನೆಹರೂ ಮೆಮೋರಿಯಲ್ ಕಾಲೇಜ್‌ಲಿ ಪಿ.ಯು.ಸಿ. ಗೆ ಸೇರಿಕಂಡತ್. ಅಲ್ಲಿ ಪಿ.ಸಿ.ಎಂ.ಬಿ. ತಕ್ಕಂಡ ಈ ಹೈದಂಗೆ ಸುರೂಲಿ ಕಷ್ಟ ಆತ್. ಯಾಕೆಂತೇಳಿರೆ ಅದ್ ಇಂಗ್ಲಿಷ್ ಮೀಡಿಯಂ! ಹಠಬುಡದ ತ್ರಿವಿಕ್ರಮನಂಗೆ ಕಷ್ಟ ಆದರೂ ಆಗಲಿ ನಾ ಮಾತ್ರ ಬುಡಿಕೇ ಇಲ್ಲೆಂತೇಳಿ ಓದಿಯೇ ಓದಿತ್. ಶೇ62 ಅಂಕ ತಗ್ದೇಬುಡ್ತ್. ಇನ್ನೆಂತ ಮಾಡ್ವೊತ ಗ್ಯಾನಮಾಡ್ತ ಪ್ರಕಾಶ ಸಿಇಟಿ ಪರೀಕ್ಷೆ ತಕ್ಕಂಡ್ರೆ ಆದೋತ ಗ್ಯಾನ ಮಾಡ್ತ್. ಹಂಗೆ ಆ ಪರೀಕ್ಷೆಗೆ ಕುದ್ದತ್. ಅಲ್ಲೂ ಗೆದ್ದತ್! ಸೀದ ಮೆಕಾನಿಕಲ್ ಇಂಜಿನಿಯರಿಂಗ್‌ಗೆ ಕುರುಂಜಿ ಶ್ರೀ ವೆಂಕಟರಮಣ ಕಾಲೇಜ್ ಆಫ್ ಇಂಜಿನಿಯರ್‌ಗೆ ಸೇರಿಕಂಡತ್ ಅಲ್ಲೂ ಸುರೂಗೆ ಕಷ್ಟ ಆತ್. ಆದರೆ ಈ ಹೈದ ಆ ವಿಷಯಕ್ಕೆಉಂಬುಳು ಅಂಟಿದಂಗೆ ಅಂಟಿಕಂಡತ್.ತಕ್ಕಣೆಆದರ್‍ಲೂ ಶೇ63 ಅಂಕ ತಗ್ದೇ ತಗ್ತ್. 1998-99 ರ ಸಾಲ್‌ಲಿ ಇಂಜಿನಿಯರ್ ಪದವೀಧರ ನಾಗಿಯೇ ಮದೆನಾಡ್ನ ಮಣ್‌ನ ಮೆಟ್ಟಿತ್, ಮನೆಬಾಗ್‌ಲ್ ತಟ್ಟಿತ್.

ಹೈದ ಹಜ(ಸೊಲ್ಪ) ಲಾಚಾರ್ ಪಾಪ, ಅವನೇ ಅಡಿಗೆ ಮಾಡಿಕಂಡ್ ಓದ್‌ತಿತ್ ಅನ್ನ-ನೀರ್‌ಸಾರ್(ರಸಂ) ಅವನ ಪ್ರೀತಿಯ ಅಡಿಗೆ ಯಾಗಾರೊಮ್ಮೆ ಉಪ್ಪಿಟ್ "ಬಾರ್-ಬೀರ್‌ತ" ಶೋಕಿ ಮಾಡ್ವ ಹೈದ ಅಲ್ಲ. ಕೆಲವು ಹೇಳಿವೆ ನೋಡಿ ಅಂತದೆಲ್ಲಾ ಓದಕನ ಎಗ್ ತಿಂದ್ ಪೆಗ್ ಏರ್‍ಸಿ, ತುಟಿಲಿ ಸಿಗರೇಟ್ ಅಂಟಿಸಿಕಂಡ್ ಓದಿರೆ ನೆಟ್ಟಂಗೆ ತಲೆಗೆ ಹತ್ತಿದೆ. ಇಲ್ಲರೆ ಕಾಲಿಗೆ ಹತ್ತುದು, ಅಲ್ಲಿಂದ ಇಳ್ದ್ ಹೋದೆಗಡತ ಹೌದಾ ಪ್ರಕಾಶ್‌ಂತ ಅವನ ನಾ ಕೇಳ್ದೆ ಆಗ ಅಂವ " ಅದೆಲ್ಲಾ ಶೋಕಿಗಾರರ ಮಾತ್ , ಚಟಕ್ಕಿಂತ ಹಠ ಮುಖ್ಯಂತ ಹೇಳ್ತ್. ಈ ಪದವಿಗಾಗಿ ಇವಂಗೆ ಆದ ಖರ್ಚ್ ಸುಮಾರಾಗಿ 80ಸಾವಿರ. ಖರ್ಚ್ ಮಾಡುವ ಮಕ್ಕ ಮನೆಯವರ "ಸರಿಯಾಗಿ" ಹಿಂಡಿವೆ. ಇಂವ ಅಂಥವಲ್ಲ.

" ನೀ ಮುಂದೆ ಎಂಥ ಮಾಡಿಯಂತ" ಕೇಳಿರೆ " ಯಾವ್ದಾರ್ ದೊಡ್ಡ ಕಾರ್ಖಾನೇಲಿ ಇಂಜಿನಿಯರ್ ಆಗಿ ಕೆಲ್ಸ ಮಾಡೊಕು. ಯಾಕೆಂತೇಳಿರಿ ಥಿಯರಿಗಿಂತ ಪ್ರಾಕ್ಟಿಕಲ್ ಮುಖ್ಯ ಆದ್‌ರ್‌ಂದ ಕಾರ್ಖಾನೆಲಿ ಕೆಲ್ಸ ಮಾಡಿ ಅಭ್ಯಾಸ ಆದ ಮೇಲೆ " ಎಂ.ಟೆಕ್" ಮಾಡೊಕುಂತ ಒಳೆಂತ ಹೇಳ್ತ್ ಓದುಗರಾದ ನೀವೂ ಎಲ್ಲಾರ್ ಒಳ್ಳಕಡೆ ಕೆಲ್ಸ ಕೊಡ್ಸಿಕೆ ನೋಡಿ.

ಸರಳಜೀವಿಯಾದ ಜಯಪ್ರಕಾಶನ ನೀವು ಮಾತಾಡ್ಸಿರೆ ಅಂವನ ಮುಖಂದ ಪ್ರಕಾಶಮಾನವಾದ ನಗೆ ಹೊರಹೊಮ್ಮಿದೆ. ಅಂವ ಸುಖದ ಬಾಳ್‌ನ ಬಾಳಿಕಂಡ್ ಯಾಗೊಳು ನಾಗಾಡಿಕಂಡಿರುದರ ನಾವು ನೀವೆಲ್ಲಾ ನೋಡಿ ಖುಷಿಪಡನೊ. ಇಂವ ಗ್ಯಾನ ಮಾಡ್ವಂಗೇ ಆಗಲಿ.

ಬಿ. ಆರ್. ಜೋಯಪ್ಪ.ಮದೆ.

---

## ಚುಟುಕುಗಳು

1. ನಮ್ಮೊರಿನಲ್ಲಿದ್ದಾಳೆ ಕುಂಟಿ,
   ಅವಳು ಬೆಳೆಸುತ್ತಾಳೆ ಶುಂಠಿ.
2. ಊಟಕ್ಕೆ ಬೇಕು ಮುತ್ತುಗದ ಎಲೆ,
   ಮೋಜಿಗೆ ಬೇಕು ವೀಳ್ಯದ ಎಲೆ.
3. ದೇವರಿಗೆ ಪೂಜೆ ಮಾಡುವುದು ಗಂಧದ ಕಡ್ಡಿಯಲ್ಲಿ
   ನಮಗೆ ಪೂಜೆ ಮಾಡುವುದು ಸಿಕ್ಕಿದ ಕಡ್ಡಿಯಲ್ಲಿ.
4. ಮರದಲ್ಲಿತ್ತು ಮಾವಿನಕಾಯಿ
   ಬಳ್ಳಿಯಲ್ಲಿತ್ತು ಕುಂಬಳಕಾಯಿ.
5. ಹನಿಗೂಡಿದರೆ ಹಳ್ಳ
   ತೆನೆಗೂಡಿದರೆ ಬಳ್ಳ.
6. ಏ ಸುಂದರಿ ನಿನ್ನ ನೋಡದೆ ಹೋದರೆ ಕಣ್ಣುರಿ
7. ನುಡಿದರೆ ಮುತ್ತಿನ ಹಾರದಂತಿರಬೇಕು
   ಇದು ಅಂದಿನ ವಚನ.
   ನುಡಿದರೆ ಎಂಜಲು ಹಾರದಂತಿರಬೇಕು
   ಇದು ಇಂದಿನ ವಚನ.

---

**ಹವ್ಯಕ ಬ್ರಾಹ್ಮಣರಿಗೂ ಅರೆಭಾಷಿಕರಿಗೂ ಹತ್ತಿರದ ನೆಂಟಸ್ಥಇದೆ**

# ಅಪ್ಪ ಸಾಯದೇ.....?

ಮದುವೆಯಾಗಿ ಆರ್ ವರ್ಷ ಕಳ್ದ್ ಮೇಲೆ ಹುಟ್ಟಿದ ಮಂಜ ವಯಸ್ಸಿಗೆ ಬಾಕನ ಮನೆ ಬುಟ್ಟ್ ಓಟ ಹಾಕಿರೆ ಅಪ್ಪ ಅವ್ವನ ಗತಿ ಎಂತಾದು? ಹೌದು ನನ್ನ ಮಂಜಗೆ ಇಂದಿಗೆ ಸರಿಯಾಗಿ ಹದ್ನಾರ್ ವರ್ಷ ತುಂಬಿತ್. ಹತ್ತನೆ ಕ್ಲಾಸ್‌ಲಿ ಡುಂಕಿ ಹೊಡ್ದಕ್ಕೆ ಬೆನ್ನಿಗೆ ನಾಕ್ ಬಾರಿಸಿದೆ. ಅದರ್ನೆ ನ್ಯವನ ಮಾಡಿಕಂಡ್ ಅಟ್ಟಲಿಕಟ್ಟಿ ಇಸಿದ ಒಂದು ಮೂಟೆ ಏಲಕ್ಕಿನ ಹೊತ್ತ್‌ಕಂಡ್ ಹೇಳದೆ ಕೇಳದೆ ಮನೆಬುಟ್ಟ್ ಹೋವುಟು.

ಸುಮಾರ್ ಇಪ್ಪತ್ತ್ ಇಪ್ಪತ್ತೆರ್ಡ್ ವರ್ಷದ ಹಿಂದೆ ನಾನ್ ಮದುವೆ ಆಕಾಕನ ಚಾಂಪನು ಇದ್ದೊ. ಚಾಮವ್ವನೂ ಇದ್ದೊ. ಮದುವೆಯಾಗಿ ವರ್ಷನಾಕಾದರೂ ಮಕ್ಕ ಆತ್ಲೆತ್ತೇಳಕಕನ ಅವ್ವನೂ, ಚಾಮವ್ವನೂ ಸೇರಿಕಂಡ್ ನನ್ನ ಹೆಣ್ಣ್‌ನ ದೂರಿಕೆ ಸುರು ಮಾಡ್ದೊ, ಅವುಳು ಹಿಡ್ದದ್ ಮುಟ್ಟಿದ್ ಯಾವ್ದು ಅವುಕೆ ಸರಿಯಾತಿತ್ತ್‌ಲೆ. ಅವುಳು ಸಾರ್ ಮಾಡಿಸಿರೆ ಚಾಮವ್ವ ಬೆಕುತ್ತಲೆ ಒಂದು ಹಿಡಿ ಉಪ್ಪು ಜ್ಯಾಸ್ತಿ ಹಾಕಿ ಬುಡ್ದು, ಒಗ್ದ ಬಟ್ಟೆ ಮಾಡಿ ಆತ್ಲೆತ್ತೇಳಿ ಪಿರಿಪಿರಿ ಹೇಳ್ದು, ಅವಳ ತೌರುಂದ ಯಾರಾರ್ ಬಂದರೆ ಗೂಡುಂದ ಕೋಳಿಗಳ ಬುಟ್ಟ್‌ದೂರ ಓಡ್ಸಿಬುಡ್ದು ಎಲ್ಲಾ ಮಾಡ್ತಿದ್ದೊ. ನನ್ನ ಹೆಣ್ಣ್ ನಂಗೂ ಗೊತ್ತಾಗದಂಗೆ ಒಳಗೊಳಗೆ ಮರ್ಬ್ಯಂಕಂಬತಿತ್ತ್, ನಂದೋ ಅತ್ತ ಅವ್ವನವರಕಡೆ ನಿಲ್ಲಿಕಾಗದೆ. ಇತ್ತ ಹೆಣ್ಣ್‌ನ ಪರವಾಗಿ ಮಾತಾಡಿಕಾಗದೆ ತ್ರಿಸಂಕುನ ಸ್ಥಿತಿಯಾಗಿತ್ತ್, ಅಷ್ಟೆಯಾದರೆ ತೊಂದರೆ ಇತ್ತ್‌ಲೆ ಹೆಂಗಾರ್ ಕಳೆತಿತ್ತ್ ಈಗೀಗ ಅವ್ವನೂ, ಚಾಮವ್ವನೂ ಸೇರಿಕಂಡ್, ಅವುಳ್ ಇನ್ನ್ ಹೆರಿಕಿಲೆ, ನೀನ್ ಇನ್ನೊಂದು ಮದುವೆಯಾಗ್‌ತ್ತೇಳಿ ಜೀವತಿಂಬಕೆ ಸುರುಮಾಡ್ದೊ. ನಂಗೆ ನೆಮ್ಮದಿನೇ ಕೆಟ್ಟ್‌ಹೋತ್, ಹೆಣ್ಣ್ ಕಂಡಕಂಡ ದೇವ್ರಿಗಲ್ಲಾ ಹರ್ಕೆ ಹೊತ್ತ್‌ಗಣ್ತ್, ನಾನ್ ಮಂಡೆಬೆಚ್ಚಲಿ ಸ್ವಲ್ಪ ಸ್ವಲ್ಪ ಹಾಕಿಕೆ ಸುರುಮಾಡ್ದಂವ ಈಗ ಅದರ ದಾಸನೇ ಆಗ್ಬುಟ್ಟಿದ್ದೆ. ಹಂಗೆ ಒಂದು ದಿನ ಸಕತ್ತ್ ಏರ್ಸಿ ರಾತ್ರಿ ಮನೆಗೆ ಬಂದ್ ಮಿಯದೇ ಊಟನೂ ಮಾಡದೇ ಬಿದ್ದ್‌ಕಂಕಡವ ಎಚ್ಚರ ಆಕಕನ ಬೆಳಿಗ್ಗೆ ನಾಕ್‌ಗಂಟೆ, ನಂಗೆ ಹೊಟ್ಟೆಯೆಲ್ಲಾ ತೊಳ್ಸಿದಂಗಾಗಿ ವಾಂತಿ ಬರ್ದಂಗಾತ್ ಸೀದಾ ಬಚ್ಚಲ್ ಮನೆಗೆಹೋಗಿ ವ್ಹೆಕ್ ವ್ಹೆಕ್ ವಾಂತಿ ಮಾಡಿಕಂಡೆ, ತಿರ್ಗಿಸೋಡ್ರೆ ಸೊಸೆ ವಾಂತಿ ಮಾಡಿಕಂಬುದುತ ಗೇನಮಾಡಿ ಅವ್ವ ನೋಡಿಕೆ ಬಂದ್ ನಿತ್ತಿತ್ತ್!

ಹಂಗು ಹಿಂಗೂ ಮತ್ತೆ ಒಂದಾರ್ ತಿಂಗಳ ಕಳೆಕಾಕನ, ಹೆಣ್ಣ್ ಒಂದು ದಿನ ನಾನ್ ಹಾಸಿಗೆಂದ ಏಳಿಕೆ ಮುಂದೆ ಒಂದು ಗ್ಲಾಸ್ ಕಾಫಿ ಹಿಡ್ಕಬಾತ್ ಬಾರಿ ಖುಷಿಲೇ ಇತ್ತ್. ಇದೇನ್ ಇಂದ್ ಯಾಗೋಳ್ ಇಲ್ಲದ ಉಪಚಾರ ಬಹುಶಃ ತೌರುಗೆ ಹೋನೆತ ಕೇಳಿಕೆ ಬಂದಿರ್ದುತ ನಾಗೇನ ಮಾಡಿಕಂಡ್ ಏನ್ ವಿಷಯತ ಕೇಳ್ದೆ ಇನ್ನ್ ಮುಂದೆ ನೀವು ಕುಡಿಯಲೆತ್ತೇಳಿ ಭಾಸೆಕೊಟ್ಟರೆ ಒಂದು ಖುಷಿನ ವಿಷಯ ಹೇಳ್ನೆತ್ತೇಳ್ತ್. ಎಂತದ್ ಹೇಳ್ ಮರಾಯ್ತಿತ್ತೇಳ್ದೆ ಈಗ ಅವಳ ಮೋರೆ ಕೆಂಪಾತ್ ನಾಚಿಕೆಲಿ ತಲೆ ತಗ್ಗಿಸಿ ಹೇಳ್ ಅದ್.... ಅದ್.... ನಂಗೀಗ ಮೂರುತಿಂಗ.....!

ಈಗೀಗ ಅವ್ವಂಗೂ ಚಾಮವ್ವಂಗೂ ಸೊಸೆತ್ತೇಳ್ರೆ ಸಾಕ್ಷಾತ್ ದೇವತನೇ ಆಗಿಬುಡ್ತ್. ಮನೆಗೆ ಮಾರಿಯಾಗಿದ್ದವಳು ಒಂದೇ ಸಾರಿ ಸುಕುಮಾರಿಯಾಗಿ ಬುಡ್ತ್ ನಂಗೂ ಎಂತದೊ ಬಾರಿ ಸಾಧನೆ ಮಾಡ್ದಷ್ಟ್ ಖುಷಿಯಾತ್. ಆ ಖುಷಿಲೇ ಹೆಣ್ಣಿಗೆ ಒಂಬತ್ತ್ ತಿಂಗ ತುಂಬಿಹೋತ್, ಅವ್ವನು ಚಾಮವ್ವನೂ ಹೆರಿಗೆಗೆ ತೌರುಗೆ ಕಳ್ಸಲೆತ ಹಠ ಹಿಡ್ದೊ. ಹೆಣ್ಣಿಗೆ ತಿಂಗ ತುಂಬಿ ದಿನ ಹತ್ರ ಬಾಕಕನ ಚಾಮವ್ವ ಹಾಸಿಗೆ ಹಿಡ್ತ್ ವಯಸಾಕಕನ ಬರುವ ಕಾಯಿಲೇ ಎಲ್ಲನೂ ಬಂದಿತ್ತ್ ಒಂದಷ್ಟ್ ದಿನ ನರ್ಳಾಡಿ ನನ್ನ ರಾಜಕುಮಾರ ಭೂಲೋಕಕ್ಕೆ ಬಂದ ದಿನ ಚಾಮವ್ವ ಯಮಲೋಕಕ್ಕೆ ಹೋತ್.

ಕೂಸು ಹುಟ್ಟಿದ ಮೇಲೆ ಮನೆನೆ ಸ್ವರ್ಗದಂಗಾತ್. ಚಾಂಪ ಅಂತೂ ಮರಿಪಿಳ್ಳೆನ ಬುಟ್ಟ್ ಒಂದು ಗಳಿಗೆ ಇರ್ತ್‌ಲೆ. ಅಪ್ಪನೂ ಅವನ ತಾರಮಾರ ಪೋಂತಿಕೆ ಸುರು ಮಾಡ್ದೊ. ಅವ್ವನಂತೂ ಯಾಗೋಳು ಸೊಂಟಕೆ ಹೇರಿಕಂಡೆ ಇರ್ತ್ತ್. ಅಂತು ಇಂತೂ ಮಂಞಂಗೆ ಆರ್‌ವರ್ಷ ತುಂಬುಕಾಕನ ಶಾಲೆಗೆ ಸೇರ್ಸಿದೆ. ಇಂವ ಶಾಲೆಗೆ ಹೋದೆನ ಕೇಳಿ? ಬೆಳಿಗ್ಗೆ ಎದ್ದಂಗೆ ಶಾಲೆದೆ ಹೋಲೆತ್ತೇಳಿ ಮರ್ಡಿಕೆ ಸುರುಮಾಡ್ರೆ ಮತ್ತೆ ಮಾಧ್ಯಾಹ್ನ ಆದ ಮೇಲೆ ನಿಲ್ಸುದು. ಹೆಂಗಾರ್ ಮಾಡಿ ಶಾಲೆಗೆ ಕಳ್ಸುಕುತ್ತೇಳಿ ನಾನ್ ಬಂದ ಕಷ್ಟ ಅಷ್ಟಿಷ್ಟಲ್ಲ. ಮನೆಲೇ ಇದ್ದರೆ ಶಾಲೆಗೆ ಹೋತ್ಲೆ ಹೇಳುವತ್ತೇಳಿ ಇಂವ ಕಾಡ್ ಹತ್ತಿಕೆ ಸುರು ಮಾಡ್ತ್. ಹಂಗೆ ಒಂದು ದಿನ ಮನೆ ಬುಟ್ಟು ಓಡ್‌ಕಾಕನ ಚಾಂಪ ತೂರುವ ಗುಂಡಿಗೆ ಜಾರಿ ಬಿದ್ದ್ ಮರ್ಬ್ಯಕಂಡ್ ಮನೆಗೆ ಬಂದವನ ಅವ್ವ ಮೀಸಿ ಪೌಡರ್ ಹಾಕಿ ಶಾಲೆಗೆ ಕರ್ಕಂಡ್ ಹೋತ್. ಅದಾದ ಮೇಲೆ ಶಾಲೆಗೆ ಮಾತ್ರ ದಿನ ರಗಳೆ ಇಲ್ಲದೆ ಹೋತಿತ್ತ್.

ಶಾಲೆಗೆ ಹೋದ ಮಾತ್ರಕ್ಕೆ ಇಂವ ಓದಿಕೆ ಕಲ್ತ್‌ತತ? ಅದೂ ಇಲ್ಲೆ ಐದನೇ ಕ್ಲಾಸಿಗೆ ಎತ್ತ್‌ಕಾಕನ ಆ.ಆ.ಇ.ಈ. ಕಲ್ತತ್. ಹೆಂಗು ಫೇಲ್ ಮಾಡದರಂದ ಹತ್ತನೇ ಕ್ಲಾಸಿಗೂ ಎತ್ತಿತ್. ಪರೀಕ್ಷೆಗೆ ಓದುತ್ತೇಳ್ರೆ ಇವಂದು ದನಕಟ್ಟುದು, ನಾಯಿನ ಮೀಸುದು, ಅಂಗಳ ಗುಡ್ಸುದು.. ಎಲ್ಲಾ ಜೋರಾತ್ ಹಾಳಾಗಿ ಹೋಗಲಿತ್ತೇಳಿ ನಾನ್ ಸುಮ್ಮನಾದೆ. ಪರೀಕ್ಷೆ ಕಳ್ದ್ ರಿಸಲ್ಟುನೂ ಬಾತ್, ನಾನ್ ಗೇನ ಮಾಡ್ದಂಗೆ ಫೇಲ್‌ನೂ ಆಗಿತ್ತ್. ಬೇಜಾರ ಎಂತದ್‌ತ್ತೇಳ್ರೆ ಒಂದು ಸಬ್ಜ್‌ಕ್ಟಾದರೂ ಸಿಕ್ಕುಟತಾ? ನಂಗೂ ಸಿಟ್ಟ್ ಬಾತ್ ಬೆತ್ತಲಿ ಬೆನ್ನಿಗೆ ನಾಕ್ ಬಿಗ್ದೆ. ಅದನ್ನೆ ನೆವನ ಮಾಡಿಕಂಡ್ ಮನೆಖಾಲಿ ಮಾಡಿಟ್ಟು, ಎಲ್ಲಾರ್ ಹಾಳಾಗಿ ಹೋಗಲಿ ಸುಮ್ಮಿರ್ನತ್ತೇಳಿ ಗೇನ ಮಾಡ್ರೆ ಕಾಗದ ಬರ್ದಿಸಿಟ್ಟು

"ಅಪ್ಪ ಸಾಯದೇ ತಿರ್ಗಿ ಈ ಮನೆ ಮೆಟ್ಟ್‌ಲ್ ಹತ್ತಿಕಿಲೆ"ತ

ರಾಜಚೆರಿಯಮನೆ, ಜೋಡುಪಾಲ



ಹವ್ಯಕರು ಅರೆಭಾಷಿಕರು ಜೊತೆ ಜೊತೆಯಾಗಿಯೆ ಪೂರ್ವದಕಡೆಯಿಂದ ಬಂದವರು

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

(ಹಿಂದಿನ ಸಂಚಿಕೆಂದ) ಧಾರಾವಾಹಿ - 6

ಆ ಬಾಲುನ ರಿಕ್ವೆಸ್ಟ್‌ನ ಈಗ ಒಪ್ಪಿಕೊಂಬದೇ ಒಳ್ಳೆದ್, ಯಾಕೆತ್ತೇಳಿರೆ ಇದರಲ್ಲಿ ಗೆದ್ರೆ ಮುನ್ನೂರು ರೂಪಾಯಿ ಸಿಕ್ಕಿದೆ, ಸೊತ್ರೆನೂ ಪರ್ವಾಗಿಲ್ಲೆ ಇಲ್ಲಿಯಾರೂ ನಮ್ಮೆವು ಇಲ್ಲೆ ಅಲ್ಲ? ಮತ್ತೆ ನಾಚಿಕೆಯಾಕೆ? ಅಂದ್ರೆ ಇಂವನ ಮಾತ್ರ ನಾನ್ ಖಂಡಿತ ಸೋಲಿಸಿ ಬುಡ್ವೆ ಅದೂಅಲ್ದೆ ಈಗ ಅರ್ಜೆಂಟಾಗಿ ದುಡ್ಡ್ ಬೇಕಲ್ಲಾ? ತ್ತೇಳ್ವ ಅನಿವಾರ್ಯತೆಯಿಂದಾಗಿ ಆಗ್ಲಿ ಈ ಪಂಥಕ್ಕೆ ನಾನ್ ರೆಡಿತ್ತೇಳಿ ಒಪ್ಪಿಕಂಡತ್.

ಆಗ ಆ ಮೂರು ಜನ ಸ್ನೇಹಿತರಿಗೂ ಬಹಳ ಖುಷಿ ಆಗಿ ಹೋತ್. ಹೋಗಿ ಎಯ್ ಶ್ಯಾಮ ಬೆಟ್ಟಕ್ಕಿಂತ ದೊಡ್ಡ ಬೆಟ್ಟ ಇದೆ ಕಣ್ಣೋ ನನ್ನ ಮೇಲೆ ಜಂಭ ಕೊಚ್ಚಿದಲ್ಲಾ ನಮ್ಮ ಈ ಹೊಸ ಗೆಸ್ಟ್ ಕೊಡಗ್‌ನ ಗೌಡ ಕುವರ ಇಂವನ ಕೈನ ಬೊಗ್ಸ್ ನೋಡೋಣ್ ನಿನ್ನಗತ್ತ್‌ನ? Mr.ರಾಜು ಅಲ್ಲಿಂದ ತನ್ನ ಗುರು ಕಾರಣವನ ಮನ್ಸ್‌ಲಿ ನೆನಸಿಕಂಡ್ ಎದ್ದ್. ಭಾತ್ ಆಗ ಆ ಶ್ಯಾಮ, ಈ ಕಡ್ಡಿ ಪೈಲ್ವಾನ್‌ನ ನೋಡಿ ಒಳ್ಳೆ ಸೋಡ ಬಾಟಲ್‌ನ ಒಡ್ಡೆಂಗೆ ಜೋರಾಗಿ ನೆಗೆ ಆಡಿಬುಡ್ತ್. ಭಾ ನನ್ನ ಮಗ್‌ನೇ ಇನ್ನೂ ಸರಿಯಾಗಿ ನಿಂಗೆ ಮೀಸೇನೇ ಮೂಡಿಲ್ಲಾ? ಭೇಷ್ ನಿನ್ನ ಧೈರ್ಯಕ್ಕೆ ಮೆಚ್ಚೋಳೆ. ಆದ್ರೇ ನಾನ್ ಸೋತರೆ ನಿಂಗೆ 200 ರೂಪಾಯಿ ಕೊಟ್ಟನೆ, ಆದ್ರೇ ನೀನ್ ಸೋತರೆ ನಿನ್ನ ಎದುರ ನಿಂತ್ ನಿನ್ನ ಕಿವಿ ಹಿಡ್‌ಕಂಡ್ 10ಬಸ್‌ಕೆ ಹೊಡಿಯೋಕು ಸರಿನಾ ತೇಳಿಕೇಳ್ತ್ ರಾಜು ಆದು ತ್ತೇಳಿ ತಲೆಆಡಿಸಿಕಂಡ್ ಶರಟ್ ತೋಳ್‌ನ ಮಡಚಿಕಂಡತ್. ಗೋಪಿ, ಶೀನ, ಮತ್ತೆ ಬಾಲು ಈ ಮೂರು ಜನ ಮಿಸ್ಟರ್ ರಾಜುನ ಬೆಂಬಲಕ್ಕೆ ನಿಂತೊ.

ಇಬ್ಬರೂ ಎದುರು ಬದುರು ಮೊಣಕೈನ ಊರಿದೊ. ಅವರ ಎಡ್ದ್‌ಕೈನ ಬೆನ್ನ್ ಹಿಂದಕ್ಕೆ ಮಡುಚಿ ಮಡುಗಿಸಿದೊ, ಮತ್ತೆ ಬಲಗೈ ಹಸ್ತನ ಪರಸ್ಪರ ಗಟ್ಟಿಯಾಗಿ ಹಿಡ್‌ಕಂಡೊ. ಶ್ಯಾಮ ಕಣ್ಣ್‌ನ ಕೆಂಪುಮಾಡಿ ದುರು ಗುಟ್ಟಿಕಂಡ್ ರಾಜುನ ಬೆರಳ್‌ಗಳನ್ನ ಜೋರಾಗಿ ಅಮುಕಿ ಹಿಡ್ದ್ ಮುದ್ದೆಮಾಡಿ ಇರ್‌ಕನ ರಾಜು ನಕೈಬೆರಳೆಲ್ಲಾ ಮುದ್ದೆ ಆಗಿ ಬೇನೆ ಶುರುಆತ್. ಆಗ ರಾಜು ಗೇನ ಮಾಡ್ತ್ ನನ್ನ ಮುಷ್ಠಿನ ಮೊದಲೇ ಸಡಿಲ ಬುಟ್ಟರದ ಹಿಂಗೆ ಆತ್‌ತ್ತೇಳಿ ಇಂವ ಒಂದ್ ಧಂ ಎಳ್ದ್ ಆ ಶ್ಯಾಮ್‌ನ ಮುಷ್ಠಿನ ಒಂದ್ ಸರ್ತಿ ಎಸಂಡ್ ಕೊಂಬುಂದ ಇರ್‌ಕಿದಂಗೆ ಟೈಟ್‌ಮಾಡ್ತ್ ಶ್ಯಾಮನ ಕೈ ಬೆರಳ್ ಕಟ ಕಟತ ನೆಟಿಗೆ ಮುರ್‌ಕಂಡ್ ಮುದ್ದೆ ಆತ್, ಹಂಗೇ ಮುಷ್ಠಿನ ಬಿಗಿಮಾಡಿಕಂಡ್ ಶಕ್ತಿಕೊಡ್ತ್. ಶ್ಯಾಮಂಗೆ ಬೇನೆ ಜಾಸ್ತಿಆಗಿ ಕಣ್ಣ್‌ಲಿ ನೀರ್ ತುಂಬಿಕೆ ಸುರುಆತ್ ಧಂ ಕಟ್ಟಿಕೆ ಬೊತ್ತದೆ ಬುಸ್‌ಗುಟ್ಟಿತಿತ್. ರಾಜುನ ಕೈನ ಹಿಂದೆಕೆ ತಳ್ಳುವ ಶಕ್ತಿ ಕೂಡಾ ಪ್ರಯೋಜನಕ್ಕೆ ಬರ್ತಾಇಲ್ಲೆ, ಈಗ ಸದ್ಯ ಈ ಹೈದನ ಮುಷ್ಠಿಂದ ತನ್ನ ಕೈ ಬುಡುಗಡೆ ಆದ್ರೆ ಸಾಕಪ್ಪಾತ್ತೇಳಿ ಸಂಕಟ ಪಡ್‌ತಿತ್. ಈ ನೋವುನ ಹೇಳುವಾಗೂ ಇಲ್ಲೆ ಬಿಡುವಂಗೂ ಇಲ್ಲೆ. ಆಗ ಆ ಶ್ಯಾಮನ ತೋಳು ನಿಧಾನಕ್ಕೆ ಗಡಿಯಾರದ ಮುಳ್ಳ್ ತಿರುಗಿದಂಗೆ ಕೆಳ್‌ಗಡೆಗೆ ವಾಲಿಕಂಡೇ ಬಂದ್ ಕೊನೆಗೆ ಆ ಟೇಬಲ್ ಮ್ಯಾಲೆ ದಡ್ಡಂತ್ತೇಳಿ ಬಿದ್ದ್‌ಹೋತ್. ಆ ಶ್ಯಾಮಂಗೆ ಅವಮಾನ ಆಗಿ ಹೋಗಿ ಹೆಚ್ಚ್ ಬೇನೆ ಆಗಿ ಸಿಟ್ಟ್ ಬಂದ್ ದುರುಗುಟ್ಟಿ ಕಂಡ್ ಹಲ್ಲ್‌ಕಡಿಯುತಿತ್. ಅಷ್ಟೊತ್ತಿಗೆ ಬಾಲು ಶ್ಯಾಮನ ಜೋಬಿಗೆ ಕೈಹಾಕಿ ನೂರರ ಎರಡ್ ನೋಟ್‌ನ ಎತ್ತಿಕೊಡ್ತ್. ಹಂಗೇ ಇವರ ಕಡೇದ್‌ತ್ತೇಳಿ ಮೂರುಜನುಂದ ಹತ್ತರ ಹತ್ತ್‌ನೋಟ್‌ನ ಸೇರಿಸಿಕೊಟ್ಟೊ. ಈ ಪ್ರೆಂಡ್ಸ್‌ಗ ರಾಜುನ ಎತ್ತಿ ಮುದ್ದಾಡಿ ಖುಷೀಲಿ ಅವನ ಕೈ ಹಿಡ್ದ್ ಶೇಖ್ ಹ್ಯಾಂಡ್ ಮಾಡ್ತಿರ್‌ಕಾಕನ ಶ್ಯಾಮಂಗೆ ಇವರ ಮೇಲೆ ತಿರುಗಿ ಬಿಳಿಕೆ ಧೈರ್ಯ ಬರದೆ ಬುಸ್ ಗುಟ್ಟಿಕಂಡ್ ಎದ್ದ್ ಹೊರಗೆ ಹೊರಟಿತ್. ಆಗ ಹಿಂದೆಂದ ಈ ಮೂರು ಜನ ನಗೆ ಆಡಿಕಂಡ್ ನೋಡ್ದೇನೋ ಶ್ಯಾಮಾ ನೀನೇ ದೊಡ್ಡ ಬೆಟ್ಟ ಅಂತ ಕೊಚ್ಚಿ ಕೊಳ್ತಾ ಇದ್ದ. ಬೆಟ್ಟಕ್ಕಿಂತ ದೊಡ್ಡ ಬೆಟ್ಟಂಗೆ ಬೇರೆ ಎಷ್ಟೋ ಇದ್ದದೆತ್ತಾ ಇನ್ನಾದ್‌ರ್ ತಿಳ್ಕಾತಾ ಕೂಗಿ ಕರ್ದ್ ಹೇಳ್ದೊ.

ಮಿಸ್ಟರ್ ರಾಜುಗೆ ಈ ತೋಳುಬಲದ ಜಯ ಒಂದು ಮುಖ್ಯವಾದ ಗೆಲುವು ಆತ್. ಅವನ ಮನ್ಸ್‌ಲಿ ಒಳ್ಳೆ ಆತ್ಮಬಲ ಮೂಡಿತ್. ಇದರಂದ ಅವನ ಮುಂದಿನ ಕಾರ್ಯಾಚರಣೆಗೆ.ಒಂದ್ ಟರ್ನಿಂಗ್ ಪಾಯಿಂಟ್ ಸಿಕ್ತ್, ಅಯ್ಯೋ ದೇವ್ರೇ ನಂಗೆ ಮುಂದಕ್ಕೂ ಈ ತರದ ಯಾವುದಾದರೂ ಒಂದೊಂದು ಬಾಜಿಕಟ್ಟಿ ಗೆಲ್ಲುವಂತಹ ಕೆಲಸ ಸಿಕ್ಕುತಿದ್ರೇ... ಬಹಳ ಒಳ್ಳೆದ್ ಆತಿತಲ್ಲಾ? ಎಲ್ಲಾದಕ್ಕೂ ನನ್ನ ಗುರುಕಾರಣವನ ದಯೆ ನನ್ನ ಮೇಲಿದ್ರೆ ಅದ್ ಖಂಡಿತಾ ಆದೆತ್ತೇಳಿ ಹಂಗೇ ಮನ್ಸ್‌ಲಿ ಆ ದೇವರ ನೆನಸಿಕಂಡತ್ ಆಗ ಅಲ್ಲೇ ಹತ್ರ ಬಂದ ಸಪ್ಲೈರ್ ಕರ್ದ್ ಹೇಳ್ತ್ ನಾಲ್ಕು ಇಡ್ಲಿ ಎರಡ್ ಒಡೆ ಚಟ್ನಿ ಹಂಗೇ ಒಂದ್ ರವಾದೋಸೆ ರೆಡಿ ಆಗ್ಲಿತ್ತೇಳ್ತ್, ತಿಂಡಿ ತಿಂದ್ ಕಾಫಿ ಕುಡುಕಂಡ್ ಅಲ್ಲೆ ಮೇಜಿನ ಮ್ಯಾಲೆ ಬಿದ್ದಿದ್ದ ಅಂದ್‌ನ ಲೋಕಲ್ ಪೇಪರ್‌ನ ತಕಂಡ್ ಅದರ ಮ್ಯಾಲೆ ಕಣ್ಣಾಡಿಸಿತ್. ಅದರಲ್ಲಿ ಒಂದ್ ಕಡೆ ನರಹಂತಕ ವೀರಪ್ಪನ್ ಬಂಟರ ಸೆರೆ, ಇನ್ನೊಂದ್ ಕಡೆ J.H. ಪಟೇಲಂನ ಕುರ್ಚಿ ಅಲ್ಲಾಡುತಿದ್ದುದರ ವರದಿ, ಜಯಲಲಿತನ ಕಾವೇರಿ ನೀರಿನ ವಿವಾದದ ಬಗ್ಗೆ, ಹಿಂಗೆಲ್ಲಾ ಮಾಮೂಲಿ ವರದಿಗ ಅಷ್ಟೆ, ಹಂಗೆ ಆ ಪೇಪರ್‌ನ ಹಿಂದೆ ತಿರುಗಿಸಿ ಓದಿಕೆ ಸುರುಮಾಡ್ತ್ ಕೊನೆಪುಟದ ಒಂದಂ ಚೌಕಕಾರದ ಕಾಲಂ ಇಂವನ ದೃಷ್ಟಿಗೆ ಬೀತ್.

"ಕುಸ್ತಿ ಪ್ರಿಯರಿಗೆ ಒಂದ್ ರಸದೌತಣ. ಚನ್ನಯ್ಯ ಕುಸ್ತಿ ಅಖಾಡ, ದೊಡ್ಡಕೆರೆ ಮೈದಾನದಲ್ಲಿ ಈದಿನ ಸಂಜೆ, 4½ ಗಂಟೆಯಿಂದ ಹೆಸರಾಂತ ಬಾಕ್ಸಿಂಗ್ ಪಟುಗಳಿಂದ ಫ್ರೀಸ್ಟೈಲ್ ಕುಸ್ತಿಗ. ಸೋಲು ಗೆಲುವುಗಳ ಸೆಣಸಾಟ ತಪ್ಪದೆ ನೋಡಲು ಮರೆಯದಿರಿ" ತಾ ಇತ್. ಆಗ ರಾಜು ಕೈಲಿದ್ದ ವಾಚ್‌ಕಡೆ ನೋಡ್ತ್ ಗಂಟೆ 10½ ಆಗಿತ್ತ್. ತಿಂದ ತಿಂಡಿ ಬಿಲ್ಲ್ ಪ್ಲೇಟ್ ಮೇಲೆ ಹೆಚ್ಚಿಗೆ 1ರೂಪಾಯಿ ಕಾಯಿನ್ ಮಡಗಿ ಅಲ್ಲಿಂದ ಒಂದ್ ಸಿಗರೇಟ್ ಹಚ್ಚಿಕಂಡ್ ಮೇಲೆ ಎದ್ದತ್.

ಈ ಫ್ರೀಸ್ಟೈಲ್ ಕುಸ್ತಿನ ನಾನ್ ನೋಡಕಲ್ಲಾ? ಸಾಮಾನ್ಯ ಆಗಿ ನಮ್ಮ ಕಡೆ ಜನಂಗ ಮದ್ಯೆ ಮನೆಗಳಲ್ಲಿ ಕಳ್ಳ್‌ಕುಡ್ಕಂಡ್

ಹೊಡ್ವಾಡಿ ಕಂಬೊಂತ ಫ್ರೀ ಸ್ಟೈಲ್ ಜಗಳನ ಕಣ್ಣಾರೆ ನೋಡ್ಯೋಳೆ ಮತ್ತೆ T.V. ಲಿ ಸಿನಿಮಾಲಿ ಮಾಮೂಲಿ ಸ್ಟಂಟ್ ಫೈಟಿಂಗ್‌ನ ನೋಡ್ಯೊಳೆ ಆದ್ರೇ ರಿಯಲ್ ಫ್ರೀಸ್ಟೈಲ್ ಫೈಟಿಂಗ್ ಹೆಂಗಿದ್ದದೆ? ತಾ ಗ್ಯಾನ ಮಾಡಿಕಂಡ್ ಮಹಾರಾಣೀಸ್ ಕಾಲೇಜ್ ಹಾಸ್ಟೆಲ್ ಕಡೇಂದ ಹೆಜ್ಜೆ ಹಾಕಂಡ್ ನಡಿತಾ ಇತ್. ಮುಂದೆ ಸಿಗ್ನಲ್ ಲೈಟ್ ಬಂದಾಕನ ತಲೆ ಎತ್ತಿ ನೋಡ್ದ್ ರಾಜು ಹಂಗೇ ಎಡಕ್ಕೆ ತಿರುಗಿ ದೇವರಾಜ್ ಅರಸ್ ರಸ್ತೆಕಡೆಗೆ ಕಾಲ್ ಹಾಕಿತ್ತ್. ಅಬ್ಬಾ ಎಷ್ಟ್ ಅಗಲದ ರಸ್ತೆ. ಇದ್ ಎಷ್ಟೆಷ್ಟ್ ದೊಡ್ಡ ದೊಡ್ಡ ಅಂಗಡಿ ಮಳಿಗೆಗ ಇಲ್ಲಿ ಓಡಾಡುತ್ತಿರುವ ವೆಹಿಕಲ್‌ಗ ದೊಡ್ಡವು ಸಣ್ಣವು ಲೆಕ್ಕ ಇಲ್ಲಂದಂಗೆ ಇರುವೆ ಸಾಲುಗಟ್ಟಿ ಹೋಗುತ್ತಾ ಇರುವಂಗೆ ಕಾಣುತಾ ಉಟ್ಟು ಅಯ್ಯಯ್ಯೋ! ಇಲ್ಲಿ ಓಡಾಡ್ಸುವ ಗಾಡಿಗಳ ಸೈಡ್‌ಲಿ ನಿಲ್ಸಿಕಂಬಕೇ ಜಾಗ ಇಲ್ಲೆ.

ಕಣ್ಣಿಗೆ ಬೇಕ್ ಬೇಕಾದಷ್ಟ್ ಅಂಗಡಿಲಿ ಸಾಮಾನ್‌ಗ ಅಲ್ಲಿ ನಡಿಯುತಿದ್ದ ವ್ಯಾಪಾರ, ತುಂಬಿರುವ ಜನ ಥೂ ಇವರ ಮಧ್ಯ ಪುಟ್‌ಪಾತ್ ಮ್ಯಾಲೆ ನಡ್‌ಕಂಡ್ ಹೋಕೇ ಎಷ್ಟೊಂದ್ ಕಷ್ಟತಾ ಆಶ್ಚರ್ಯಲಿ ಕಣ್ಣ್‌ರಳಿಸಿ ನೋಡಿಕಂಡ್ ಹಂಗೆ ಕೆ.ಆರ್. ಸರ್ಕಲ್ ಹತ್ರಕ್ಕೆ ಬಂದ್ ತಲಪಿತ್. ಈ ಕೆ. ಆರ್. ಸರ್ಕಲ್‌ಲಿ 4-5ಕಡೆ ಸಿಗ್ನಲ್‌ಲೈಟ್‌ಗ ಹಂಗಾಗಿ ಅದರ ದಾಟಿಕೇ ಕಾಲ್ ಗಂಟೆ ಹಿಡ್ತ್ ಅದರ ದಾಟಿದಂಗೆ ಎದುರುಗಡೆ ದೊಡ್ಡ ಹುಲ್ಲಿನ ಬಾಣೆ (ಮೈದಾನ) ಅಲ್ಲಿ ತುಂಬಾ ಜನ ಆರಾಂ ಆಗಿ ಗುಂಪು ಗುಂಪುಲಿ ಕುದ್ದ್ ಕಂಡ್ ಹರಟೆ ಹೊಡೆಯುತಿದ್ದೊ. ಅವರ ನೋಡ್ತ ರಾಜು ಆ ಕಡೆಗೆ ನಡ್ತ್ ಬೇರೆ ಹೋಗಿ ಒಂದ್ ಮರದ ಕೆಳಗೆ ಒಬ್ಬನೇ ಕುದ್ದತ್. ಅಷ್ಟೊತ್ತಿಗೆ ಕಡ್ಲೆಕಾಯಿ ಮಾರುವ ಅಜ್ಜ ಬಂದ್ ಬುದ್ದೀ ಗರಮಾ ಗರ್‌ಮ್ ಕಡ್ಲೆ ಟೈಂಪಾಸ್‌ಗೆ ತ್ತಾ ಕೇಳ್ತ್ ಸರಿ ಆ ಅಜ್ಜನ ಕೈಂದ ಒಂದ್ ಸೇರ್ ಕಡ್ಲೆ ಕಾಯಿನ ತನ್ನ ಕೈ ಚೌಕಕ್ಕೆ ಸೊರಗಿಸಿಕಂಡತ್, ಒಳ್ಳೆರುಚಿ ಆದ ಹುರ್ದ್ ಬಿಸಿ ನೆಲಗಡಲೆಕಾಯಿ ಅದರ ತುಂಬಾ ಹೊತ್ತ್ ಚೊಲ್ಲಿ ಕಂಡ್ ತಿನ್ನತಿತ್. ಅಷ್ಟೊತಿಗೆ ಆ ಮರದ ಬುಡಕ್ಕೆ ಬೈಲ್‌ಕುಪ್ಪ ಟಿಬೇಟ್ ಹೆಂಗಸ್‌ಗ ರೆಡಿಮೇಡ್ ಶರಟ್, ಸ್ವೆಟರ್ಸ್, ಶೂಗಳ ಮೂಟೆಲಿ ಮಾರಿಕೆ ಹೊತ್ತ್‌ಕಂಡ್ ಬಂದೊ. ಬಾಯಿ ಶಾಬ್ ಸಿಂಗಾಪುರ್‌ಕಾ ಚಪ್ಪಲ್ ಹೈ ಬರ್ಮಾಕಾ ಶೂವ್ಸ್ ಹೈ ಶರಟ್ಸ್ ಹೈ ದೇಕ್ಲೋನಾ ಬಾಯಿ ಶಾಬ್‌ತ್ತೇಳಿ ತಮ್ಮ ಗಂಟ್‌ನ ಕೆಳಗೆ ಇಳ್ಸಿದೊ. ಅವರ ಮೂಟೆನ ಬಿಚ್ಚಿಸಿ ನೋಡಿರೆ ಒಳ್ಳೊಳ್ಳೆ ಇಂಪೋರ್ಟೆಡ್, ಬಟ್ಟೆಗ, ಶೂವೇಗ ಬನೀನ್, ನಿಕ್ಕರ್‌ಗ ನೋಡಿಕೆ ಒಳ್ಳೆ ಖುಷಿ ಆತ್ ಸರಿ ಸದ್ಯಕೆ ನಾನ್ ನನ್ನ ವೇಷನ ಬದಲಾಯಿಸಿಕಂಬೋಕು ಹೆಂಗಿದ್ರೂ ಆ ಹಾಳ್ ಪೋಲೀಸ್‌ಗ ನನ್ನ ಬೆನ್ನ್ ಹಿಂದೆ ಬಿದ್ದರುವತಾ ಗ್ಯಾನ ಮಾಡಿ ಅವರೊಟ್ಟಿಗೆ ಸ್ವಲ್ಪ ಚೌಕಾಸಿ ಮಾಡಿ ಒಂದ್ ಜೊತೆ ಶೂವ್, ಶರಟ್ ಪ್ಯಾಂಟ್‌ಗಳ ಖರೀದಿ ಮಾಡ್ತ್. ಆಮ್ಯಾಲೆ ಅಲ್ಲೆ ತನ್ನ ಹಳೇ ಬಟ್ಟೆಗಳನೆಲ್ಲಾ ಬಿಚ್ಚಿ ಬಿಸಾಡಿ ಈ ಡ್ರೆಸ್‌ನ ಹಾಕಂಡತ್, ಈಗ ರಾಜುಗೆ ಒಳ್ಳೆ ಧೈರ್ಯ ಬಾತ್. ಯಾಕೆತ್ತೇಳಿರೆ ಈಗ ರಾಜುನ ವೇಶ ಪೂರ್ಣ ಆಗಿ ಬದಲಾಗಿ ಹೋತ್. ಹುಚ್ಚನಂಗಿದ್ದ ವೇಶ ಈಗ ಬದಲಾಗಿ ಒಳ್ಳೆ ಜಂಟ್ಲಮನ್‌ತರ ಆಗಿಟ್ಟು

ಇದೆಲ್ಲಾ ಆಕನ ಗಂಟೆ ಮುಳ್ಳು 3½ ತೋರ್‍ಸ್ತಿತ್ ಅಲ್ಲಿಂದ ಎದ್ದ್ ಜನರೊಟ್ಟಿಗೆ ಕೇಳಿಕಂಡ್ ದೊಡ್ಡ ಕೆರೆ ಮೈದಾನದ ಕಡೆಗೆ ಹೆಜ್ಜೆಹಾಕಿತ್. ಆಗ ಅರಮನೆ ಗೇಟ್ ಎದ್‌ರ್‌ಗಡೆಗೆ ಬಂದ್ ಅರಮನೆನ ದೂರದಿಂದಲೇ ನೋಡ್ತ್ ಮತ್ತೆ ಎದುರುಗಡೆ ಇದ್ದ ಹನುಮಾನ್‌ದೇವರ ಗುಡಿಗೆ ಒಂದ್ ಪ್ರದಕ್ಷಿಣೆ ಹಾಕಿ ಕೈಮುಗ್ದ್ ಅಲ್ಲಿಂದ ಅರಮನೆನ ಬಳ್ಸಿಕಂಡೆ ನಡ್ತ್ ಕುಸ್ತಿ ಅಖಾಡದ ಕಡೆಗೆ ಹೊರಟಿತ್.

---

5ನೇ ಪುಟದಿಂದ

ಕಾಲೇಜಿನಲ್ಲಿ ಓದಿ ಜೊತೆಯಲ್ಲಿಯೇ CRPFಗೆ ಆಯ್ಕೆಯಾದ ಅರೆಭಾಷಿಕ ಯುವತಿಯರಾಗಿದ್ದಾರೆ.

ರೂಪನವರು ಸೋಮವಾರಪೇಟೆ ಹಿತ್ಲುಗದ್ದೆ ಗ್ರಾಮದ ಶ್ರೀ ದೇವಾಯಿರ ನಂಜುಂಡರವರ ಮೊದಲನೇ ಪುತ್ರ ಶಿವಪ್ರಾಕಶ್‌ರನ್ನು ವರಿಸಿದ್ದಾರೆ. ಅವರು ಕೂಡ ಜೊತೆಯಾಗಿಯೇ CRPF ನಲ್ಲಿಯೇ ಸರ್ವಿಸ್ ಮಾಡುತ್ತಿದ್ದಾರೆ. ಇವರಿಗೆ ಇಬ್ಬರು ಹೆಣ್ಣು ಮಕ್ಕಳು. ಶಿವಪ್ರಕಾಶ್‌ರವರ ಸಹಕಾರದಿಂದ ಅದೇ ಸರ್ವಿಸ್ ಅನ್ನು ಮದುವೆನಂತರವೂ ಸಹ ಮುಂದುವರಿಸುತ್ತಿದ್ದಾರೆ. ಆದರೂ ಇವರಿಬ್ಬರು ಒಂದೇ ಸ್ಥಳದಲ್ಲಿ ಸರ್ವಿಸ್ ಮಾಡುತ್ತಿರುವುದರಿಂದ ಅಷ್ಟೇನೂ ಕಷ್ಟವಾಗಿ ಕಾಣಿಸುತ್ತಿಲ್ಲವಂತೆ.

ಇವರ ಟ್ರೈನಿಂಗ್ 9 ತಿಂಗಳು ಆದರೂ ಇವರಿಗೆ ಮೊದಮೊದಲಲ್ಲಿ ಭಾಷೆಯ ಸಮಸ್ಯೆ ಇದ್ದುದ್ದರಿಂದ ಸ್ವಲ್ಪ ಕಷ್ಟವಾಗುತ್ತಿದ್ದರು ನಂತರ ಇವರೆ ಬೇರೆಯವರೊಂದಿಗೆ ಮಾತನಾಡುತ್ತಾ ಬೇಗನೆ ಭಾಷೆಯನ್ನು ಕಲಿತುಕೊಂಡರಂತೆ. ಭಾಷೆ ಬಾರದೆ ಇದ್ದಾಗ ಈ ಡೆಲ್ಲಿಯಲ್ಲಿ ಹೇಗೆ ಇರುವುದೆಂದು ಚಿಂತಿಸುತ್ತಾ ಈ ಸರ್ವಿಸ್ ಯಾಕಾಗಿ ಬೇಕಿತ್ತು ಎಂದೆಲ್ಲಾ ಅನ್ನಿಸುತ್ತಿತ್ತಂತೆ. ಒಡಹುಟ್ಟಿದವರನ್ನು ಬಿಟ್ಟು ಹೋದ ಹೊಸತರಲ್ಲಿ ಮನೆಕಡೆಯ ನೆನಪಾಗುತ್ತಿದ್ದರೂ ಸಿಕ್ಕಿದ ಕೆಲಸವನ್ನು ಬಿಟ್ಟರೆ ಈಗಿನ ಕಾಲದಲ್ಲಿ ಇನ್ನು ಏನು ಕೆಲಸ ಸಹ ಸಿಗಲಾರದು ಎಂದು ಯೋಚನೆಯಾಗುತ್ತಿತ್ತಲ್ಲದೆ ಎದೆಗುಂದದೆ ಹಿರಿಯರ ಆಣತಿಯಂತೆ ಧೈರ್ಯವಾಗಿ ಎದುರಿಸಿದರೆನ್ನುವಾಗ ಏನೋ ಒಂದು ಹೆಮ್ಮೆ ಇವರಿಗೆ. ಸಂಗಾತಿಯ ಬಗ್ಗೆ ಕೇಳಿದಾಗ

ಕೊಡಗು ಸಂಗಾತಿ ಪತ್ರಿಕೆಯು ನಮ್ಮ ಜನಾಂಗದ ಬಗ್ಗೆ ತುಂಬಾ ಒಳ್ಳೆಯ ಅಭಿಪ್ರಾಯವನ್ನು, ಸಂಘಟನೆ, ಚಿಂತನೆಯನ್ನು ಜನರಲ್ಲಿ ಮೂಡಿಸಿದೆ, ಇದರಿಂದ ನಮ್ಮ ಗೌಡ ಸಂಸ್ಕೃತಿ ಎಷ್ಟೊಂದು ಉನ್ನತ ಮಟ್ಟಕ್ಕೆ ಏರುತ್ತಿದೆ. ಗೌಡ ಜನರಲ್ಲಿ ಆತ್ಮ ವಿಶ್ವಾಸವನ್ನು ಮೂಡಿಸುತ್ತಿದೆ. ಕೊಡಗು ಸಂಗಾತಿ ಪತ್ರಿಕೆಯು ಇಂದು ಎಲ್ಲರ ಮನೆಯಲ್ಲಿ ಬರುವಂತಾಗಿದೆ. ಸಂಪಾದಕ ಸಂಪಾದಕಿಯವರ ಶ್ರಮಕ್ಕೆ ನಾವುಗಳು ಅಬಾರಿಯಾಗಿದ್ದೇವೆ. ಅವರಿಗೆ ಹೆಚ್ಚಿನ ಶಕ್ತಿಯನ್ನು ಕುಲದೇವರು ವೆಂಕಟರಮಣ ಸ್ವಾಮಿ ದಯಪಾಲಿಸಲಿ ಎಂದು ನಾವಿಬ್ಬರು ತುಂಬು ಹೃದಯದಿಂದ ಹಾರೈಸುತ್ತೇವೆ.

ಬರಹ : ತಡಿಯಪ್ಪನ ಕುಮಾರಜಯ

---

ಗೌಡ ಯುವಕರೇ ನಿದ್ದೆಯಿಂದ ಎದ್ದೇಳಿ

## ಸಂಗಾತಿ ರಾಶಿ ಫಲ ಮಾರ್ಚ್ 16-31

ಜೋತಿಷರು : ಗಿರೀಶ್‌ಕುಮಾರ್, ಕೊಯನಾಡು

**ಮೇಷರಾಶಿ** : ಅನಾವಶ್ಯಕವಾದ ಖರ್ಚು ವೆಚ್ಚಗಳಿಗೆ ಆಸ್ಪದಕೊಡಬೇಡಿ. ಅನಾರೋಗ್ಯವು ನಿಮ್ಮನ್ನು ಕಾಡುವುದು, ಶುಭಕಾರ್ಯಗಳಿಗೆ ಪ್ರಯಾಣ ಬೆಳೆಸಲು ಸೂಕ್ತ ಸಮಯವಿಲ್ಲ. ಸಂಸಾರದಲ್ಲಿ ಕಿರಿಕಿರಿಯಾದೀತು, ಶನೀಶ್ವರನನ್ನು ಆರಾದನೆ ಮಾಡಿ.

**ವೃಷಭರಾಶಿ** : ಅಜೀರ್ಣ ಸಂಬಂಧ ರೋಗಗಳು ಬರಬಹುದು. ಗುಪ್ತವಾಗಿದ್ದ ಇಚ್ಚಿತ ಫಲ ದೊರೆಯುವುದು. ಸ್ಥಾನಮಾನಗಳಿಗೆ ಯಾವುದೇ ರೀತಿಯ ಧಕ್ಕೆ ಬರಲಾರದು. ಭೋಗ ಭಾಗ್ಯಗಳು ಒದಗಿಬರುವುದು ಶ್ರೀಕೃಷ್ಣ ಸ್ಮರಣೆ ಮಾಡಿ.

**ಮಿಥುನರಾಶಿ** : ಲಗ್ನ ಸಂಬಂದಿಸಿದ ವಿಷಯಗಳಲ್ಲಿ ತೊಡಗಿ, ಫಲಕಾರಿಯಾಗಬಹುದು. ವ್ಯಾಪಾರಸ್ಥರಿಗೆ ಲಾಭದಾಯಕ ವಾಗಬಹುದು. ಆಸ್ತಿಯಲ್ಲಿ ಹೇರಳ ಧನಲಾಭವಾದೀತು ವಿಷ್ಣು ಆರಾದನೆ ಮಾಡಿ.

**ಕರ್ಕಾಟಕ ರಾಶಿ** : ದುಷ್ಟಫಲಗಳು ಬಂದೊದಗಿದೆ, ಆಪ್ತಸ್ನೇಹಿತರಿಂದ ದೂರವಿರುವುದು ಒಳ್ಳೆಯದು. ಗುಪ್ತವಾಗಿ ಶತ್ರುಗಳ ವಂಚನೆಗೆ ಬಲಿಯಾಗುವಿರಿ. ನಾಗಾರಾಧನೆ ಮಾಡಿ ಕುಲದೇವತಾ ಆರಾಧನೆ ಮಾಡಿಕೊಂಡು ಬನ್ನಿ.

**ಸಿಂಹರಾಶಿ** : ಸಂಸಾರದಲ್ಲಿ ಕಲಹ ದೋಷಗಳು ಬರಬಹುದು. ತುಂಬಾ ಜಾಗ್ರತೆಯಿಂದ ಕಾರ್ಯನಿರ್ವಹಿಸಿ. ಶುಭ ಕಾರ್ಯಗಳಿಗೆ ಅಡ್ಡಿ ಬರಬಹುದು. ಧನವ್ಯಯ ಆಗಬಹುದು. ಮಿತ್ರರ ಸಹಾಯ ಒದಗಿಬರುವುದು.

**ಕನ್ಯಾರಾಶಿ** : ಭೂ ಖರೀದಿಗೆ ಇದು ಉತ್ತಮ ಕಾಲ. ಕುಟುಂಬದಲ್ಲಿ ಕಲಹವೇರ್ಪಡುವುದು. ಅತ್ತ ಶತ್ರುಗಳಿಂದ ಉಪಟಳ ಬರಬಹುದು. ನವಗ್ರಹಗಳ ಆರಾಧನೆ ಆಡಿಕೊಂಡು ಬನ್ನಿ.

**ತುಲಾರಾಶಿ** : ಕಷ್ಟಗಳು ದೂರವಾಗುವುದು ಸಂಸಾರದ ಮನೋವ್ಯಾದಿಗಳು ಪರಹಾರವಾಗುವುದು. ಸರ್ವಶತ್ರುಗಳು ನಾಶವಾಗುವುದು, ಆಸ್ತಿ ಸಂಗ್ರಹಕ್ಕೆ ಒಳ್ಳೆಯ ಕಾಲ ವ್ಯಾಪಾರದಲ್ಲಿ ಉತ್ತಮ ಫಲ ದೊರೆಯುವುದು.

**ವೃಶ್ಚಿಕರಾಶಿ** : ಅನಾವಶ್ಯಕ ತಿರುಗಾಟದಿಂದ ಆರೋಗ್ಯಕ್ಕೆ ಧಕ್ಕೆ ಉಂಟಾದೀತು. ಹಿತ ಶತ್ರುಗಳ ಉಪಟಳ ತಪ್ಪಿದ್ದಲ್ಲ. ಸರ್ವಕಷ್ಟಗಳ ಪರಿಹಾಂಕ್ಕೆ ನಾಗತಂಬಿಲಾದಿಗಳನ್ನು ಮಾಡಿಕೊಂಡು ಬನ್ನಿ. ಮಹಾಗಣಪತಿಯನ್ನು ನಂಬಿಕೊಂಡು ಬನ್ನಿ.

**ಧನಸ್ಸುರಾಶಿ** : ಸಹೋದರರಿಗೆ ಕಷ್ಟ ಒದಗಿ ಬರಹಬಹುದು. ಗೃಹವಲಯದಲ್ಲಿ ಅಡಚಣೆಗಳು ಬಂದರೂ ಶಮನವಾಗುವುದು. ಮಾನಸಿಕ ಅಶಾಂತಿಗೆ ಗುರುಜಪ ಮಾಡಿಕೊಂಡು ಬನ್ನಿ.

**ಮಕರರಾಶಿ** : ಗೃಹ ಕೃತ್ಯಗಳಲ್ಲಿ ಏರುಪೇರು ಉಂಟಾದೀತು. ಹಿರಿಯರ ಆರೋಗ್ಯವು ಕ್ಷೀಣಿಸುವುದು. ಶತ್ರುಗಳಿಂದ ಉಪಟಳ ಹೆಚ್ಚಬಹುದು. ಈಶ್ವರನನ್ನು ಆರಾದನೆ ಮಾಡಿ ಮುಕಾಂಬಿಕಾ ಆರಾದನೆ ಮಾಡಿಕೊಂಡು ಬನ್ನಿ.

**ಕುಂಬರಾಶಿ** : ಮನನೊಂದ ಘಟನೆಯಿಂದ ಗೃಹದಲ್ಲಿ ಸುಖವಿಲ್ಲ. ಮನೋವ್ಯಾದಿ ಹೆಚ್ಚಳವಾಗಬಹುದು. ಕೆಲಸದಲ್ಲಿ ಅಡ್ಡಿ ಆತಂಕಗಳು ಬರಬಹುದು. ಕುಲದೇವತಾರಾದನೆ, ಮಹಾಗಣಪತಿ ಆರಾದನೆ ಮಾಡಿಕೊಂಡು ಬನ್ನಿ.

**ಮೀನರಾಶಿ** : ಅನಾರೋಗ್ಯ ಸಂಭವ. ಮಾನಹಾನಿ ಆಗಬಹುದು. ವ್ಯವಹಾರ ಉದ್ಯೋಗಗಳಿಗೆ ಕುಂದುಕೊರತೆ ಉಂಟಾದೀತು. ಅನಾವಶ್ಯಕ ತಿರುಗಾಟದಿಂದ ದಕ್ಕೆ ಉಂಟಾದೀತು. ಉಪವಾಸ ವೃತ ಮಾಡುವಿರಿ ಮಡದಿಯೊಂದಿಗೆ ನಿಷ್ಟುರ ಸಲ್ಲದು.

---

### "ನಿಂಗೆ ಅಮೇರಿಕಾ ಗೊತ್ತುಟ್ಟಾ?"

ಸ್ಕೂಲ್‌ಲಿ ಮಾಸ್ಟ್ರ ರವಿನ ಕೇಳ್ತ್ ನಿಂಗೆ ಅಮೇರಿಕ ಗೊತ್ತುಟ್ಟಾತ? ಇಲ್ಲೆ ಸಾರ್ ನಂಗೆ ಗೊತ್‌ಲೆ. ಆಗ ಮಾಸ್ಟ್ರ ಹೇಳ್ತ್ ನೀನ್ ಈ ಸ್ಕೂಲ್‌ಲಿ ಇರಿಕೆ ಲಾಯಿಕ್ ಇಲ್ಲೆ ಹೋಗು ತೇಳ್ತ್. ಇಂವ ಬೇಜಾರ್‌ಲಿ ಮನೆಗೆ ಬಾತ್. ಮನೆಲಿ ಅಣ್ಣ ಕೇಳ್ತ್. ಏನೀ ಒಂತಾರ ಬೇಜಾರ್‌ಲಿ ಒಳ ಆಗ ಇಂವ ಸ್ಕೂಲ್‌ಲಿ ಮಾಸ್ಟ್ರ ಅಮೇರಿಕ ಗೊತ್‌ಲೆ ತೇಳ್ದೇಕೆ ನೀನ್ ಸ್ಕೂಲ್‌ಲಿ ಇರಿಕೆ ಲಾಯಿಕಿಲ್ಲೆ ತೇಳಿ ಕಳ್ಸಿ ಬುಡ್ತ್. ಅದಿಕೆ ಬೇಜಾರಾಗೊಳೆ ತೇಳ್ತ್. ಆಗ ಅಣ್ಣ ನಿಂಗೆ ಅಮೇರಿಕ ಗೊತ್‌ಲೆ? ಇಲ್ಲೆಣ್ಣಾ ಗೊತ್ತ್‌ಲೆ. ನೀನ್ ಈ ಮನೇಲಿ ಇರಿಕೆ ಲಾಯಿಕಿಲ್ಲೆ ಹೋಗು ತೇಳ್ತ್. ಇಂವ ಬೇಜಾರಲಿ ಎಳನೀರ್ ಮಾರುವವನತ್ರ ಬಾತ್ ಅಂವ ಕೇಳ್ತ್ ಏನ್ರ ಬಾಳ ಬೇಜಾರ್‌ಲಿ ಒಳತ ಕೇಳ್ತ್ ಆಗ ರವಿ ಮೇಲಿನ ವಿಷಯ ಎಲ್ಲ ಹೇಳ್ತ್. ಆಗ ಅಂವ ಹೇಳ್ತ್ ನಿನ್ ಎಳೆನೀರ್ ಕುಡಿಯಾಕೆ ಲಾಯಿಕಿಲ್ಲೆ ಹೋಗು ತೇಳ್ತ್ ಇಂವ ಅಲ್ಲಿಂದ ಬೇಜಾರ್‌ಲಿ ಮುಂದೆ ಒಂದು ಬಸ್ ಸ್ಟಾಂಡಿಗೆ ಹೋತು ಅಲ್ಲಿ ಕಂಡಕ್ಟರ್ ಕೇಳ್ತ್ ಏನ್ಮಾರಯ ಬೇಜಾರ್ ಒಳ. ಹತ್ ಬಸ್ ತೇಳ್ತ್ ಇಂವ ಹಿಂದೆ ನಡ್ದ್ ವಿಷಯ ಎಲ್ಲಾ ಹೇಳ್ತ್ ಆಗ ಕಂಡೆಕ್ಟರ್ ಹೇಳ್ತ್ ಈ ಬಸ್ಸಿಗೆ ಹತ್ತಿಕೆ ಲಾಯಿಕಿಲ್ಲೆ ಹೋಗು ತೇಳ್ತ್. ಇಂವ ಬೇಜಾರ್‌ಲಿ ಮುಂದೆ ಹೋಕನ ಒಬ್ಬ ಕಾಕ ಮೀನೆ ಮೀನೆ ತೇಳಕಂಡ್ ಬಾತ್ ಇಂವನ ಕಂಡ್ ಎನ್ರ ಬಾಳ ಬೆಜಾರ್‌ಲಿ ಒಳ ಕೊಡ್‌ಲ ಒಂದು ಕೇಜಿ ತೇಳ್ತ್ ಇಂವ ಹಿಂದೆ ನಡ್ದ್ ವಿಷಯ ಎಲ್ಲಾ ಹೇಳ್ತ್ ಕಾಕ ಹೇಳ್ತ್ ನೀನ್ ಸರೀಯಾಗ ಕೇಳ ಈಗ ನಾನ್ ಹೇಳ್ತ್ ಒಳೆ ನೀನ್ ಈ ಪ್ರಪಂಚಲೆ ಇರಿಕೆ ಲಾಯ್ಕಾದ ಪಾಂಜ್ಞಲ್ಲೆ ಡತ ಹೇಳ್ತ್.

ಬಲ್ಯಾಟನ ಪದ್ಮಯ್ಯ. ಬೆಂಗಳೂರು.

---

ಅರೆಭಾಷಿಕ ಹಿರಿಯರನ್ನು ಸ್ಮರಿಸಿ - ವಿಚಾರವಂತರಾಗೋಣಾ




**✦ ಕೌಂಡಿನ್ಯ : ಧಾರವಾಹಿ -26**

ಎಡತೊರೆ ಬಂಗಲೆ!

ಅಲ್ಲಿ ಈಗ ಯಾವಗಲೂ ನಿಶ್ಯಬ್ದತೆ ನೆಲೆಸಿರುತ್ತದೆ. ಕೆಲಸದ ಆಳುಗಳಿಗೆ ಕೆಲಸವೇ ಇಲ್ಲ!

ಅಲ್ಲಿರೋದು ಮೂರು ಮಂದಿ!

ಪ್ರಸನ್ನ..... ಇಬ್ಬರು ಅಣ್ಣಂದಿರು!

ಪ್ರಸನ್ನ ತನ್ನ ಅಕ್ಕ ಸತ್ತ ಕೂಡಲೇ ಅವಳ ರೂಮಿಗೆ ಹೋಗಿ ಹುಡುಕಾಡಿದ್ದನು.

ಅರುಂಧತಿಯ ಡೈರಿ ಸಿಕ್ಕಿತ್ತು!

ಪ್ರಸನ್ನ ತಪ್ಪು ತಿಳಿದು ಕೊಂಡಿದ್ದನು. ಹಿಂದೆ ಎರಡು ಸಲ ಅವನನ್ನು ಸಾಯಿಸಲು ಯಾರೋ ಪ್ರಯತ್ನಿಸಿದ್ದರು. ಅಕ್ಕ ಅರುಂಧತಿಯೇ ಕೊಲೆ ಮಾಡಲು ಸಂಚು ಹೂಡಿದ್ದಾಳೆ ಎಂದುಕೊಂಡಿದ್ದನು.

ಡೈರಿ ಸತ್ಯ ತಿಳಿಸಿತ್ತು!

ಅರುಂಧತಿಗೆ ತನ್ನ ಸಹೋದರ ಪ್ರಸನ್ನನನ್ನು ಸಾಯಿಸಬೇಕು ಅಂತ ಉದ್ದೇಶ, ಆಶೆ ಇತ್ತು!

ಏನೇನೊ ಪ್ಲಾನ್ ಮಾಡಿದ್ದಳು

ಬರೀ ಮನಸ್ಸಿನ ಲೆಕ್ಕಾಚಾರ!

ಅವಳು ಒಂದನ್ನು ಸಹ ಕಾರ್ಯಗತ ಮಾಡಲು ಪ್ರಯತ್ನಿಸಲೇ ಇಲ್ಲ! ಆದಕ್ಕೆ ಕಾರಣ ಭಯ!

ವಿಪರೀತ ಭಯ!

ಇದನ್ನೆಲ್ಲಾ ಅರುಂಧತಿ ಡೈರಿಯಲ್ಲಿ ಬರೆದಿದ್ದಳು! ಅದನ್ನು ಓದಿದ ಮೇಲೆ ಪ್ರಸನ್ನನಿಗೆ ಭಯವಾಗಿತ್ತು!

ಎರಡು ಸಲದ ಕೊಲೆಯ ಪ್ರಯತ್ನ ನಡೆದಿದೆ. ಅಕ್ಕ ಅಲ್ಲದಿದ್ದರೆ ಬೇರೆ ಇನ್ಯಾರು ಮಾಡಿದ್ದಾರೆ!

ಅಣ್ಣಂದಿರ ನೆನಪಾಯಿತು!

ವೀರಭದ್ರ...............ಲಿಂಗಯ್ಯ!

ಈ ನಿಧಿ ದೊರೆತು ಕೆಲವು ವರ್ಷಗಳಾಗಿದೆ. ಮೂರು ವರ್ಷಗಳು ಕಳೆದಿದೆ! ಆಗಿನಿಂದಲೂ ಅವರಿಬ್ಬರಿಗೆ ಬುದ್ಧಿ ಭ್ರಮಣೆಯಾಗಿದೆ.

ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ನಿಧಿಯನ್ನು ಕಂಡು ಅವರು ಮಾನಸಿಕ ಸಮತೋಲನ ಕಳೆದು ಕೊಂಡಿದ್ದರು! ಅಂದಿನಿಂದ ಹಾಗೆಯೇ ಇದ್ದಾರೆ!

ನಾಟಕ ಆಡುತ್ತಿರಬಹುದೆ?

ಇರಲಾರದು ಎನಿಸಿತು. ಒಂದು ವಾರವೊ, ತಿಂಗಳೊ ಎಲ್ಲಾ ನಿಧಿಯನ್ನು ಲಪಟಾಯಿಸಲು ನಾಟಕ ಆಡುತ್ತಿದ್ದಾರೆ ಎಂದರೆ ನಂಬಬಹುದು. ಕಾರಣವೂ ಇದೆ!

ಮೂರು ವರ್ಷಗಳ ದೀರ್ಘ ಅವಧಿ!

ಅಷ್ಟೊಂದು ದೀರ್ಘ ಕಾಲ ಹುಚ್ಚರಂತೆ ನಾಟಕ ಆಡುವ ಅಗತ್ಯವೇ ಇಲ್ಲ!

ಕೇವಲ ನನ್ನನ್ನು ಸಾಯಿಸಲು ಹುಚ್ಚರಂತೆ ಮೂರು ವರ್ಷಗಳ ಕಾಲ ನಾಟಕ ಆಡಬೇಕಾಗಿಲ್ಲ!

ಬೇರೆ.... ಬೇರೆ ಏನೋ ಇದೆ!

ಪ್ರಸನ್ನ ಸಿಗರೇಟ್ ಹತ್ತಿಸಿದನು.

ಅವನಿಗೆ ತನ್ನ ಅಕ್ಕ ಅರುಂಧತಿ ಮತ್ತು ಅವಳ ಗಂಡನ ಭಯಾನಕ ಸಾವಿನ ದೃಶ್ಯ ನೆನಪಾಯಿತು!

ಬೆನ್ನಿನ ಹುರಿಯಲ್ಲಿ ನಡುಕ!

ಇದು....... ಇದು ಹೇಗೆ ಸಾಧ್ಯ?

ಹುತ್ತದಲ್ಲಿದ್ದ ಹಾವುಗಳು ಇವರಿಬ್ಬರ ದೇಹಕ್ಕೆ ಮಾತ್ರ ಏಕೆ ಸುತ್ತಿಕೊಂಡಿತ್ತು?

ಈ ಸಾವಿನ ಹಿನ್ನಲೆ ಏನು?

ನನ್ನನ್ನು ಎರಡು ಸಲ ಸಾಯಿಸಲು ಪ್ರಯತ್ನಿಸಿದವರೆ ಅಕ್ಕ, ಭಾವನನ್ನು ಕೊಂದಿರಬಹುದೆ?

ಇದಕ್ಕೆ ಕೊನೆ ಹೇಗೆ?

ಇದನ್ನು ಹೇಗೆ ಪತ್ತೆ ಮಾಡುವುದು?

ಪ್ರಸನ್ನ ಈಗ ಫ್ರಿಡ್ಜ್‌ನಿಂದ ರಮ್ ಸೀಸೆಯನ್ನು ಹೊರತೆಗೆದು ಗ್ಲಾಸಿಗೆ ಬಗ್ಗಿಸಿದನು.

ನಿಧಾನವಾಗಿ ರಮ್ ಚಪ್ಪರಿಸುತ್ತಾ ಸಿಗರೇಟ್ ಅನ್ನು ಸೇದಲಾರಂಭಿಸಿದನು.

ರೂಮಿನ ಹತ್ತಿರ ಏನೋ ಶಬ್ದವಾಯಿತು. ಈಗ ಪ್ರಸನ್ನ ಕತ್ತನ್ನು ಹೊರಳಿಸಿದನು.

ಅಲ್ಲಿ ಯಾರು ಇರಲಿಲ್ಲ!

ಪ್ರಸನ್ನ ಗ್ಲಾಸಿನಲ್ಲಿದ್ದ ರಮ್ ಅನ್ನು ಒಂದೇ ಸಲಕ್ಕೆ ಗಂಟಲಿಗೆ ಸುರಿದುಕೊಂಡು ಹೊರಟನು.

ಆಗ ರಾತ್ರಿ ಹನ್ನೊಂದು ಗಂಟೆ!

ಕಾರಿಡಾರ್‌ನಲ್ಲಿ ಯಾರೂ ಇರಲಿಲ್ಲ!

ಪ್ರಸನ್ನ ಚುರುಕಾಗಿ ಎಲ್ಲಾ ಕಡೆ ನೋಡುತ್ತಿದ್ದಾನೆ. ಅವನ ಕಣ್ಣಿಗೆ ಯಾರು ಸಹ ಕಂಡು ಬರಲಿಲ್ಲ!

ಈ ಹೆಜ್ಜೆ ಶಬ್ದ ಎಲ್ಲಿಯದು?

ಪ್ರಸನ್ನ ಈಗ ಕಾರಿಡಾರ್‌ನಲ್ಲಿ ನಡೆಯುತ್ತಾ ಪ್ರತಿಯೊಂದು ರೂಮು ಗಳನ್ನು ನೋಡುತಿದ್ದಾನೆ.

ಒಂದು ರೂಮಿನ ಬಾಗಿಲು ತುಸು ಓರೆಯಾಗಿ ತೆರೆದು ಕೊಂಡಿತ್ತು! ದೀಪ ಉರಿಯುತ್ತಿತ್ತು.

ಅದು ಅಣ್ಣ ಲಿಂಗಯ್ಯನ ರೂಮು!

ಪ್ರಸನ್ನ ರೂಮಿನೊಳಗೆ ಬಂದನು. ಮಂಚದ ಮೇಲೆ ಲಿಂಗಯ್ಯ ಗೊರಕೆ ಹೊಡೆಯುತ್ತಾ ಮಲಗಿದ್ದಾನೆ!

ಪ್ರಸನ್ನ ಗಡ್ಡ ಕೆರೆದುಕೊಂಡನು.

ನನ್ನ ಅಕ್ಕನ ಗಂಡ ಹುಚ್ಚನಂತೆ ನಾಟಕ ಆಡಿದ್ದರಿಂದ ನಾನು ಅಣ್ಣಂದಿರನ್ನು ಸಹ ಅನುಮಾನಿಸುತ್ತಿದ್ದೇನೆ.

ಪ್ರಸನ್ನ ಹೊರಡಲನುವಾದನು.

**20ನೇ ಪುಟಕ್ಕೆ**

ಇಲ್ಲಿಯವರೆಗೆ.........

ರೇವತಿ ಈಗ ಗೆಳತಿಯ ಮನೆಯಿಂದ ಹೊರಡುತ್ತಾಳೆ. ಊರಿನಿಂದಲೇ ಹೋಗಬೇಕೆಂದು ಎಲ್ಲರೂ ಒತ್ತಾಯ ಮಾಡುತ್ತಾರೆ. ಆದರೆ ರೇವತಿ ಸತ್ಯ ಕಂಡು ಹಿಡಿಯಬೇಕು ಎಂಬ ಹಟದಿಂದ ಎಡತೊರೆ ಬಂಗಲೆಗೆ ಬರುತ್ತಾಳೆ. ಅಪಾಯ ಕಾದಿರುತ್ತದೆ.

ಮುಂದೆ ಓದಿ..........

# ಬಿಡುವಿಲ್ಲದ ಸಾಧನೆಯ ಮೆಟ್ಟಿಲೇರುತ್ತಿರುವ ಶ್ರೀ ಅಯ್ಯಪ್ಪ ಯುವತಿ ಮಂಡಳಿ, ಐಕೋಳ.

1995ನೇ ನವಂಬರ್ ದಿನಾಂಕ 16ರಂದು ಶ್ರೀಮಾನ್ ಕೊಂಪುಳೀರ ಗಣೇಶ್ ಬೋಪಯ್ಯನವರ ನೇತೃತ್ವದ ಅಧ್ಯಕ್ಷತೆಯಲ್ಲಿ ಶ್ರೀ ಅಯ್ಯಪ್ಪ ಯುವಕ ಮಂಡಳಿ ಆರಂಭಗೊಂಡಿತು. ಆಗ ನೂತನ ಅಧ್ಯಕ್ಷಣಿಯಾಗಿ ಕೊಂಪುಳೀರ ಚಂದ್ರಮ್ಮ ಉಶ್ವಪತಿಯವರು ಸರ್ವಾನುಮತದಿಂದ ಆಯ್ಕೆಗೊಂಡರು. ಕೇವಲ 17 ಸದಸ್ಯರಿಂದ ಆರಂಭಗೊಂಡು ಇದೀಗ 40 ಸದಸ್ಯರೊಳಗೊಂಡಿದೆ ತದನಂತರ ಅಧ್ಯಕ್ಷಣಿಯಾಗಿ ಕೊಂಪುಳೀರ ಕುಸುಮಾ ಬೋಪಯ್ಯ ನವರು ಮುಂದುವರಿಯುತ್ತಿದ್ದಾರೆ. ಈ ಅಲ್ಪ ಅವಧಿಯಲ್ಲಿ ಬಂದಿರುವ ಬಹುಮಾನ ಮತ್ತು ಪ್ರಶಸ್ತಿಗಳು ಅಪಾರ

## ಪ್ರಶಸ್ತಿಗಳು ಮತ್ತು ಕಾರ್ಯಸಾಧನೆ

| | |
|---|---|
| 19-4-1996 ರಲ್ಲಿ | ಕಟ್ಟೆಮಾಡು ಆದರ್ಶ ಮಹಿಳಾ ಮಂಡಳಿ ನಡೆಸಿದ ಥ್ರೋಬಾಲ್ ಪಂದ್ಯಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ದ್ವಿತೀಯ ಬಹುಮಾನ ಪಡೆಯಿತು. |
| 25-5-1996 ರಲ್ಲಿ | ಶ್ರೀ ಅಯ್ಯಪ್ಪ ಯುವ ಮಂಡಳಿ ನಡೆಸಿದ ಕ್ರೀಡಾಕೂಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ 'ಎ' ಮತ್ತು 'ಬಿ' ತಂಡ ಕ್ರಮವಾಗಿ ಪ್ರಥಮ ಮತ್ತು ದ್ವಿತೀಯ ಬಹುಮಾನ ಪಡೆಯಿತು. |
| 11-10-96 ರಲ್ಲಿ | ಕಟ್ಟೆಮಾಡು ಆದರ್ಶ ಮಹಿಳಾ ಮಂಡಳಿ ನಡೆಸಿದ ಹಗ್ಗಜಗ್ಗಾಟ ಸ್ಪರ್ಧೆಯಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಪ್ರಥಮ ಬಹುಮಾನ ಪಡೆಯಿತು. |
| 24-10-96 ರಲ್ಲಿ | ಶ್ರೀ ಅಯ್ಯಪ್ಪ ಯುವತಿ ಮಂಡಳಿ ಕಾವೇರಿ ಕಾಲೇಜು ವೀರಾಜಪೇಟೆ ವಿದ್ಯಾರ್ಥಿನಿಯರೊಂದಿಗೆ, ಭಾರತಿ ಹೈಸ್ಕೂಲಿನಲ್ಲಿ ಎನ್.ಎಸ್. ಎಸ್ ಶಿಬಿರದಲ್ಲಿ ಭಾಗವಹಿಸಿ ಅವರ ಮೆಚ್ಚುಗೆಗೆ ಪಾತ್ರರಾದರು. |
| 13-11-96 ರಲ್ಲಿ | ಅಭ್ಯತ್ ಮಂಗಲದಲ್ಲಿ ನಡೆದ ಹಗ್ಗಜಗ್ಗಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ದ್ವಿತೀಯ ಸ್ಥಾನ ಪಡೆಯಿತು. |
| 15-12-96 ರಲ್ಲಿ | ಮರಗೋಡುನಲ್ಲಿ ನಡೆದ ತಾಲ್ಲೂಕುಮಟ್ಟದ ಯುವ ಜನ ಮೇಳದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಕೋಲಾಟದಲ್ಲಿ ಭಾಗವಹಿಸಿ ದ್ವಿತೀಯ ಬಹುಮಾನ ಪಡೆಯಿತು. |
| 23-3-97 ರಲ್ಲಿ | ಕಟ್ಟೆಮಾಡು ಆದರ್ಶ ಮಹಿಳಾ ಮಂಡಳಿ ನಡೆಸಿದ ತಾಲೂಕು ಮಟ್ಟದ ಥ್ರೋಬಾಲ್ ಪಂದ್ಯಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ದ್ವಿತೀಯ ಬಹುಮಾನ ಪಡೆಯಿತು. |
| 27-4-97ರಲ್ಲಿ | ಶ್ರೀ ಅಯ್ಯಪ್ಪ ಯುವತಿ ಮಂಡಳಿ ನಡೆಸಿದ 2ನೇ ವರ್ಷದ ತಾಲೂಕು ಮಟ್ಟದ ಥ್ರೋಬಾಲ್ ಪಂದ್ಯಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ 'ಎ' ತಂಡ ಪ್ರಥಮ ಸ್ಥಾನ ಪಡೆಯಿತು. |
| 1-11-97ರಲ್ಲಿ | ಬಿಳಿಗೇರಿಯಲ್ಲಿ ನಡೆದ ಹಗ್ಗಜಗ್ಗಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ದ್ವಿತೀಯ ಬಹುಮಾನ ಪಡೆಯಿತು |
| 4-1-98ರಲ್ಲಿ | ಗೌಡ ಅಕಾಡಮಿ ಮಡಿಕೆರಿ ನಡೆಸಿದ ಕಾರ್ಯಕ್ರಮದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಕೋಲಾಟ, ಸೋಬಾನೆ, ಅರೆಭಾಷೆ ಹಾಡು ಹಾಗು ಮದುವೆ ಪ್ರದರ್ಶನ ಮಾಡಿರುತ್ತಾರೆ. ಹಾಗು ಬಹುಮಾನ ಪಡೆದಿರುವರು. |
| 8-1-98ರಲ್ಲಿ | ಮಡಿಕೇರಿ ಪುರಭವನದಲ್ಲಿ ನಡೆದ ಪೋಲಿಸ್ ಡೇ ಕಾರ್ಯಕ್ರಮದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಕೋಲಾಟದಲ್ಲಿ ಭಾಗವಹಿಸಿತು. |
| 23-1-98 ರಲ್ಲಿ | ತಾಳತ್‌ಮನೆಯಲ್ಲಿ ನಡೆದ ತಾಲೂಕು ಮಟ್ಟದ ಥ್ರೋಬಾಲ್ ಪಂದ್ಯಾಟದಲ್ಲಿ ಶ್ರೀ ಅಯ್ಯಪ್ಪ ಮಂಡಳಿ ಪ್ರಥಮ ಬಹುಮಾನ ಪಡೆಯಿತು. |
| 28-3-98ರಲ್ಲಿ | ಶ್ರೀ ಅಯ್ಯಪ್ಪ ಯುವತಿ ಮಂಡಳಿ ನಡೆಸಿದ 3ನೇ ವರ್ಷದ ಥ್ರೋಬಾಲ್ ಪಂದ್ಯಾಟದಲ್ಲಿ ಪ್ರಥಮ ಬಹುಮಾನ ಪಡೆದು 3ವರ್ಷದ ಪರ್ಯಾಯ ಫಲಕ ತನ್ನದಾಗಿಸಿಕೊಂಡಿದೆ. |
| 6-4-98ರಲ್ಲಿ | ಕಟ್ಟೆಮಾಡು ಆದರ್ಶ ಮಹಿಳಾ ಮಂಡಳಿ ನಡೆಸಿದ ಥ್ರೋಬಾಲ್ ಪಂದ್ಯಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ದ್ವಿತೀಯ ಬಹುಮಾನ ಪಡೆಯಿತು. |
| 12-4-98ರಲ್ಲಿ | ಅರೆಭಾಷೆ ಸಾಂಸ್ಕೃತಿಕ ಸಮಿತಿ, ಮತ್ತು ಕೊಡಗು ಸಂಗಾತಿ ಮೈಸೂರು. ಇವರ ಕಾರ್ಯಕ್ರಮದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಕೋಲಾಟದಲ್ಲಿ ಭಾಗವಹಿಸಿತು. |
| 26-4-98ರಲ್ಲಿ | ಗಾಳಿಬೀಡಿನ ಜ್ಞಾನೋದಯ ಯುವತಿ ಮಂಡಳಿ ನಡೆಸಿದ ತಾಲೂಕು ಮಟ್ಟದ ಥ್ರೋಬಾಲ್‌ನಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ದ್ವಿತೀಯ ಬಹುಮಾನ ಪಡೆಯಿತು. |
| 1-8-98,14-8-98 | ರಲ್ಲಿ ಸ್ವಾತಂತ್ರ್ಯದಿನ ಪ್ರಯುಕ್ತ ಪುರಭವನದಲ್ಲಿ ನಡೆದ ಸಾಸ್ಕೃತಿಕ ಕಾರ್ಯಕ್ರಮದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಕೋಲಾಟದಲ್ಲಿ ಭಾಗವಹಿಸಿದೆ. |

**ಗೌಡ ಜನಾಂಗದ ಬೇರು ಹಳೆಯದಾದರು ಹೊಸ ಚಿಗುರುಗಳನ್ನು ಸೇರಿಸಿ ಬಲ ಪಡಿಸಬೇಕು**

| | |
|---|---|
| 8-10-98 ರಲ್ಲಿ | ಹಾಕತ್ತೂರು ಕೈಲುಮೂಹರ್ತ ಕ್ರೀಡಾಕೂಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಥ್ರೋಬಾಲ್‌ನಲ್ಲಿ ಪ್ರಥಮ ಬಹುಮಾನ ಟೇಬಲ್ ಗಡಿಯಾರ ಪಡೆದುಕೊಂಡಿದೆ. |
| 30-10-98 ರಲ್ಲಿ | ಬಿಳಿಗೇರಿ ಕೈಲು ಮೂಹೂರ್ತ ಕ್ರೀಡಾ ಸಮಿತಿ, ಸಾಕ್ಷರ ಕಾವೇರಿ ಸಮಿತಿ ನಡೆಸಿದ ಕ್ರೀಡಾಕೂಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಥ್ರೋಬಾಲ್‌ನಲ್ಲಿ ಪ್ರಥಮ, ಭಾರದ ಕಲ್ಲುನಲ್ಲಿ ದ್ವಿತೀಯ, ಹಗ್ಗಜಗ್ಗಾಟದಲ್ಲಿ ದ್ವಿತೀಯ ಸ್ಥಾನ ಪಡೆಯಿತು. |
| 27-11-98 ರಲ್ಲಿ<br>28-11-98 ರಲ್ಲಿ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ಸ್ವಾಗತ ಸಮಿತಿ ಮಡಿಕೇರಿ ಇವರ ಸಂಯುಕ್ತ ಆಶ್ರಯದಲ್ಲಿ ನಡೆದ ರಾಜ್ಯಮಟ್ಟದ ಸಮ್ಮೇಳನದ ರಾಷ್ಟ್ರಪ್ರಶಸ್ತಿ ಸಮಾರಂಭದಲ್ಲಿ ಮಡಿಕೇರಿ ಗದ್ದಿಗೆಯಿಂದ ಗಾಂಧಿ ಮಂಟಪ ಮೈದಾನವರೆಗೆ ಮೆರವಣಿಗೆಯಲ್ಲಿ ಪಾಲ್ಗೊಂಡಿದೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಕೋಲಾಟ ಮತ್ತು ಗೌಡ ಜನಾಂಗದ ಮದುವೆ ಪ್ರದರ್ಶನ(ಗಂಗೆ ಪೂಜೆ) ನಡೆಸಿದೆ. ಮುಖ್ಯವಾಗಿ ಮೆರವಣಿಗೆಯಲ್ಲಿ ಗೌಡ ಜನಾಂಗದ ಉಡುಗೆ ಪ್ರದರ್ಶಿಸಿದೆ. ಬಹುಮಾನ ಮತ್ತು ಪರ್ಯಾಯ ಫಲಕ ಪಡೆಯಿತು. |
| 6-12-98 ರಲ್ಲಿ | ಕುಂಬಳದಾಳು ಕನ್ನಿಕಾ ಮಹಿಳಾ ಸಮಾಜ ನಡೆಸಿದ ತಾಲೂಕು ಮಟ್ಟದ ಥ್ರೋಬಾಲ್ ಪಂದ್ಯಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಪ್ರಥಮ ಬಹುಮಾನ ಪಡೆದಿದೆ. |
| 2-1-99ರಲ್ಲಿ | ಕೊಂಪುಳೀರ ಸೀತಮ್ಮನವರ ಗದ್ದೆ ಕುಯ್ದು ಹೊತ್ತು ಕಳಕ್ಕೆ ತರುವುದರೊಂದಿಗೆ 2ದಿನದ ಶ್ರಮದಾನ ಶಿಭಿರವನ್ನು ಶ್ರೀ ಅಯ್ಯಪ್ಪ ಯುವತಿ ಮಂಡಳಿ ನಡೆಸಿದೆ. |
| 23-1-99 ರಲ್ಲಿ | ನೇತಾಜಿ ಯುವಕ ಮಂಡಲಿ ತಾಳತ್‌ಮನೆ ಮಡಿಕೇರಿ ಇವರ 7ನೇ ವರ್ಷದ ವಾರ್ಷಿಕೋತ್ಸವದ ಪ್ರಯುಕ್ತ ನಡೆಸಿದ ತಾಲೂಕು ಮಟ್ಟದ ಥ್ರೋಬಾಲ್ ಪಂದ್ಯಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಪ್ರಥಮ ಸ್ಥಾನ ಪಡೆಯಿತು. |
| 7-3-99ರಲ್ಲಿ | ಮರಗೋಡುನಲ್ಲಿ ನಡೆದ ಜಿಲ್ಲಾ ಮಟ್ಟದ ಥ್ರೋಬಾಲ್ ಫಂದ್ಯಾಟದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಪ್ರಥಮ ಸ್ಥಾನ ಪಡೆಯಿತು. |
| 23-3-99 ರಲ್ಲಿ | ಐಕೊಳ ಊರಿನ ಅಯ್ಯಪ್ಪ ದೇವರ ದೇವಸ್ಥಾನದ ಅರ್ಚಕರು ವಾಸವಿರುವ ಮನೆಯನ್ನು ಸರಿಪಡಿಸುವುದರ ಮೂಲಕ ಅಯ್ಯಪ್ಪ ಯುವತಿ ಮಂಡಳಿ ಶ್ರಮದಾನ ಮಾಡಲಾಯಿತು. |
| 11-5-99 ರಲ್ಲಿ | ಗೌಡ ಮಹಿಳಾ ಒಕ್ಕೂಟ ಇವರ ವಾರ್ಷಿಕೋತ್ಸವದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ನೃತ್ಯ ಕಾರ್ಯಕ್ರಮ ಕೊಟ್ಟಿರುತ್ತದೆ ಮತ್ತು ಮೆಚ್ಚುಗೆಯನ್ನು ಗಳಿಸಿದೆ. |
| 16-5-99 ರಲ್ಲಿ | ಕೋಯಿನಾಡು, ಮಡಿಕೆರಿ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನ ಸಾಂಸ್ಕೃತಿಕ ಸಮಿತಿ ಕೊಯಿನಾಡುಗೆ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಕೋಲಾಟದಲ್ಲಿ ಭಾಗವಹಿಸಿ ಪ್ರಥಮ ಸ್ಥಾನ ಪಡೆದಿದೆ. |
| 28-5-99 ರಲ್ಲಿ | ಕಡಗದಾಳುವಿನಲ್ಲಿ ತಾಲೂಕು ಯುವ ಒಕ್ಕೂಟದ 4ನೇ ವರ್ಷದ ವಾರ್ಷಿಕೋತ್ಸವಕ್ಕೆ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿ ಬಹುಮಾನ ಪಡೆಯಿತು. |
| 29-6-99 ರಲ್ಲಿ | ಕಾರ್ಗಿಲ್ ನಿಧಿಗೆ ಶ್ರೀ ಅಯ್ಯಪ್ಪ ಯುವ ಮಂಡಳಿ ರೂ 2,100ಪರಿಹಾರ ನೀಡಿದೆ. |
| 29-11-99 ರಲ್ಲಿ<br>19-11-99 ರಲ್ಲಿ | ಮಡಿಕೇರಿ ಆಕಾಶವಾಣಿಗೆ ಭಾವಗೀತೆ, ಜನಪದ, ಮತ್ತು ಸೋಬಾನೆ ಹಾಡನ್ನು ಶ್ರೀ ಅಯ್ಯಪ್ಪ ಯುವತಿ ಮಂಡಳಿ ಕೊಟ್ಟಿರುತ್ತದೆ. |
| 11-12-99 ರಲ್ಲಿ | ಚೇರಂಬಾಣೆಯಲ್ಲಿ ನಡೆದ ತಾಲೂಕುಮಟ್ಟದ ಯುವ ಜನಮೇಳದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿಗೆ ಕೋಲಾಟದಲ್ಲಿ ಪ್ರಥಮ ಸ್ಥಾನ ದಕ್ಕಿದೆ. |
| 2-1-2000 ರಲ್ಲಿ | ಸಂಪಾಜೆಯಲ್ಲಿ ಜಿಲ್ಲಾಮಟ್ಟದ ಯುವಜನ ಮೇಳದಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿಗೆ ಕೋಲಾಟದಲ್ಲಿ ಪ್ರಥಮ ಸ್ಥಾನ. |
| 23-1-2000 ರಲ್ಲಿ | ತಾಳತ್‌ಮನೆಯಲ್ಲಿ ನಡೆದ ತಾಲೂಕು ಮಟ್ಟದ ಥ್ರೋಬಾಲ್‌ನಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿಗೆ ಪ್ರಥಮ ಬಹುಮಾನ ಸಿಕ್ಕಿದೆ. |
| 27-1-2000 ರಲ್ಲಿ | ಮೂರ್ನಾಡಿನಲ್ಲಿ 50ನೇ ಗಣರಾಜ್ಯೋತ್ಸವದ ಪ್ರಯುಕ್ತ ನಡೆದ ಹಗ್ಗಜಗ್ಗಾಟ ಸ್ಪರ್ಧೆಯಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಪ್ರಥಮ ಬಹುಮಾನ ಪಡೆಯಿತು. |
| 6-2-2000 ರಲ್ಲಿ<br>7-2-2000 ರಲ್ಲಿ | ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜು ಮಡಿಕೇರಿಯಲ್ಲಿ 50ನೇ ಸುವರ್ಣ ಮಹೋತ್ಸವದ ಪ್ರಯುಕ್ತ ನಡೆಸಿದ ಜಿಲ್ಲಾಮಟ್ಟದ ಥ್ರೋಬಾಲ್‌ನಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ ಪ್ರಥಮ ಬಹುಮಾನ ಮತ್ತು ಪ್ರಶಸ್ತಿ ತಂದಿದೆ. |

5-3-2000ರಲ್ಲಿ ಕರಡಿಗೂಡು ಸಿದ್ದಾಪುರದಲ್ಲಿ ಕಾವೇರಿ ಯುವಕ ಸಂಘ ಶಿವರಾತ್ರಿ ಪ್ರಯುಕ್ತ ನಡೆಸಿದ ಹಗ್ಗಜಗ್ಗಾಟ ಸ್ಪರ್ಧೆಯಲ್ಲಿ ಶ್ರೀ ಅಯ್ಯಪ್ಪ ಯುವತಿ ಮಂಡಳಿ 2ನೇ ಬಹುಮಾನ ಪಡೆಯಿತು.

ಅಧ್ಯಕ್ಷರು, ಯುವತಿ ಮಂಡಳಿ,
ಐಕೊಳ ಗ್ರಾಮ, ಮರಗೋಡು ಅಂಚೆ.



ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜು ಮಡಿಕೇರಿಯಲ್ಲಿ 50 ನೇ ಸುವರ್ಣಮಹೋತ್ಸವದ ಪ್ರಯುಕ್ತ ನಡೆದ ಜಿಲ್ಲಾಮಟ್ಟದ ಥ್ರೋಬಾಲ್‌ನಲ್ಲಿ ಪ್ರಥಮ ಬಹುಮಾನ ಪಡೆದ ಶ್ರೀ ಅಯ್ಯಪ್ಪ ಯುವತಿ ಮಂಡಳಿ, ಐಕೋಳ.



ಅಯ್ಯಪ್ಪ ಯುವತಿ ಮಂಡಳಿಗೆ ಇದುವರೆಗೆ ಸಿಕ್ಕಿದ ಪ್ರಶಸ್ತಿಗಳ ಸರಮಾಲೆ

# ವೈಜ್ಞಾನಿಕ ಯುಗವೋ - ಪುರಾಣವೋ?

(1) ಈ ಗಿನ ವಿಮಾನ ಹಾರಾಟ - ರಾಮಾಯಣದಲ್ಲಿ ರಾವಣನು ಸೀತೆಯನ್ನು ಅಂದು ಪುಷ್ಪಕ ವಿಮಾನದಲ್ಲಿ ಕದ್ದೊಯ್ದಿದ್ದು.

(2) ಅಣುಬಾಂಬುವಿನಂತಹ ಭಯಂಕರ ಆಯುಧವನ್ನು ಕಂಡು ಹಿಡಿದದ್ದು - ಇಡೀ ಲೋಕವನ್ನೇ ನಡುಗಿಸುವಂತಹ ಅಂದಿನ ಬ್ರಹ್ಮಾಸ್ತ್ರ, ಸರ್ಪಾಸ್ತ್ರಗಳ ಬಳಕೆ.

(3) ಸೇತುವೆ, ಆಣೆಕಟ್ಟುಗಳನ್ನು ಮೊದಲು ಕಟ್ಟಿದ್ದು - ರಾಮಾಯಣದಲ್ಲಿ ಕಪಿ ಸೇನೆ ಲಂಕೆಗೆ ಹೋಗಲು ಅಂದೆ ಸೇತುವೆ ನಿರ್ಮಾಣ.

(4) ಚಂದ್ರ ಲೋಕಕ್ಕೆ ಮಾನವನ ಪ್ರವೇಶ ಮತ್ತು ಅನ್ಯಗ್ರಹಗಳಿಗೆ ಸ್ಯಾಟ್‌ಲೈಟ್ ಉಡಾವಣೆ - ತ್ರೀಲೋಕ ಸಂಚಾರಿ ನಾರದ ಮುನಿಗಳು ಸಪ್ತ ಲೋಕವನ್ನೇ ಸುತ್ತಾಡುತ್ತಿದ್ದುದು.

(5) ಈಗಿನ ವೈರ್ ಲೆಸ್ - ಅಂದು ಬಂಧನದಲ್ಲಿದ್ದ ದೇವಕಿಗೆ ಶ್ರೀ ಹರಿಯ ಅಶರೀರ ವಾಣಿ ಮೂಲಕ ಸೂಚನೆ.

(6) ವೈದ್ಯಕೀಯ ಶಾಸ್ತ್ರದಲ್ಲಿ ಸಾವನ್ನು ಜಯಿಸಲು ಸತತ ಸಂಶೋಧನೆ - ಋಷಿ ಮುನಿಗಳಿಂದ ಯೋಗ್ಯ ವ್ಯಕ್ತಿಯನ್ನು ಉಳಿಸಲು ಸಂಜೀವಿನಿ ಪ್ರಯೋಗ.

(7) ಈಗಿನ ಬೋರ್‌ವೆಲ್ - ಆಗಿನ ಭೀಷ್ಮಾಚಾರ್ಯ ಶರಶಯ್ಯೆಯಲ್ಲಿದ್ದಾಗ ಗುಟುಕು ನೀರಿಗಾಗಿ ಅರ್ಜುನನಿಂದ ಭೂಮಿಗೆ ವರುಣಾಸ್ತ್ರ ಪ್ರಯೋಗ.

(8) ಈಗಿನ ಪ್ರನಾಳ ಶಿಶು ಜನನ. - ಅಂದಿನ ಮಹಾ ಭಾರತದಲ್ಲಿ ಗಾಂಧಾರಿಯ ನೂರು ಮಕ್ಕಳ ಜನನ.

(9) ಈಗಿನ ಸ್ಕಡ್ ಮತ್ತು ಇರಾಕ್, ಇರಾನ್ ಯುದ್ಧದಲ್ಲಿ ಪ್ರಯೋಗಿಸಲಾದ ಬಾಂಬ್‌ಗಳು - ರಾಮ ಮತ್ತು ರಾವಣರ ಕಾಳಗದಲ್ಲಿ ಬಳಸಲಾದ ಅಸ್ತ್ರಗಳು.

(10) ಅಂಗಾಂಗಗಳ ಕಸಿಯಿಂದ ರೋಗಿಯ ಪ್ರಾಣ ಉಳಿಸುವುದು - ಶಿವನು ಪಾರ್ವತಿ ಪುತ್ರನಿಗೆ ಮಾನವ ಶಿರಕ್ಕೆ ಬದಲಾಗಿ ಆನೆಯ ಶಿರದ ಜೋಡಣೆ

(11) ಈಗಿನ ದೂರ ದರ್ಶನ - ಆಗಿನ ಮಾಯಾ ದರ್ಪಣ

(12) ಈಗಿನ ಆಕಾಶವಾಣಿ - ಆಗಿನ ಅಶರೀರ ವಾಣಿ.

---

# ಕಿವಿಯ ಆರೋಗ್ಯ

1) ಅಮೃತ ಬಳ್ಳಿಯ ಬೇರನ್ನು ಎಣ್ಣೆಯಲ್ಲಿ ಅರೆದು ರಸ ತೆಗೆದು ಮೂರುದಿನ ಕಿವಿಗೆ ಹಿಂಡುವುದು.
2) ಪಾಜಳೆ ಮರದ ಮೇಣವನ್ನು ಕಿವಿಗೆರೆಯುವುದು
3) ಹಸಿ ಶುಂಠಿಯ ರಸವನ್ನು ಬಿಸಿಮಾಡಿ ಕಿವಿಗೆ 4-5 ಬಿಂದು ಹಾಕುವುದು.
4) ಹಣ್ಣಾದ ಎಕ್ಕೆ ಎಲೆಗೆ ಎಣ್ಣೆ ಅಥವಾ ತುಪ್ಪವನ್ನು ಸವರಿ ಬೆಂಕಿಯಲ್ಲಿ ಬಾಡಿಸಿ, ಕೈಯಲ್ಲಿ ಹಿಸುಕಿ ರಸವನ್ನು ಕಿವಿಗೆ ಹಾಕುವುದು.
5) ಬೆಳ್ಳುಳ್ಳಿ, ಹಿಪ್ಪಲಿ, ಕರಿಮೆಣಸು ಇವುಗಳನ್ನು ಎಣ್ಣೆಯಲ್ಲಿ ಕಾಯಿಸಿ ಸೋಸಿ ಕಿವಿಗೆ ಹಾಕುವುದು.
6) ಸಮೂಲ ಉತ್ತರಣೆಯ 25ಗ್ರಾಂ ಭಷ್ಮವನ್ನು 4 ಚಮಚ ಎಣ್ಣೆಯಲ್ಲಿ ಕದಡಿ, ಮೇಲೆ ನಿಲ್ಲುವ ತಿಳಿ ಎಣ್ಣೆಯನ್ನು ಕಿವಿಗೆ 4-5 ಬಿಂದು ಹಾಕುವುದು.
7) ಸಮುದ್ರ ನಾಲಿಗೆಯನ್ನು (ಸಮುದ್ರಫೇನ) ನಿಂಬೆರಸದಲ್ಲಿ ಅರೆದು ಕಿವಿಗೆ ಹಾಕಿದರೆ ಒಳಗಿನ ಬಾವು ಸೋರಿ ಸಿಡಿತವು ಗುಣವಾಗುತ್ತದೆ.
8) ಹೊಂಗಾರೆ ಸೊಪ್ಪಿನ ಹಸಿ ರಸವನ್ನು ಕಿವಿಗೆ ಹಿಂಡುವುದು.
9) ಬೆಳ್ಳುಳ್ಳಿ ಮತ್ತು ಹಿಂಗು ಇವುಗಳನ್ನು ಎಣ್ಣೆಯಲ್ಲಿ ಚೆನ್ನಾಗಿ ಕಾಯಿಸಿ ಸೋಸಿ ಆ ಎಣ್ಣೆಯನ್ನು ಕಿವಿಗೆ ಹಾಕುವುದು.
10) ಜೇನು ತುಪ್ಪ 1-2 ಸಾರಿ ಕಿವಿಗೆ ಹಾಕುವುದು.
11) ಒಂದು ಲವಂಗವನ್ನು ಒಂದು ಟೀ ಚಮಚ ಎಳ್ಳೆಣ್ಣೆಯಲ್ಲಿ ಹಾಕಿ ಗಾಳಿಸಿ 4-5 ಬಿಂದು ಬಿಸಿ ಎಣ್ಣೆಯನ್ನು ಕಿವಿಗೆ ಹಾಕುವುದು.
12) ನಿಂಬೆರಸವನ್ನು ಬಿಸಿಮಾಡಿ ಅದಕ್ಕೆ ನೀರು ಸೇರಿಸಿ ತೊಟ್ಟು ತೊಟ್ಟಾಗಿ ಕಿವಿಗೆ ಬಿಡುವುದು.
13) ಈರುಳ್ಳಿಯ ರಸವನ್ನು ಸ್ವಲ್ಪ ಕಾಯಿಸಿ ಕಿವಿಗಳಿಗೆ ಬಿಡುವುದು.
14) ಬೆಳ್ಳುಳ್ಳಿಯ ರಸಕ್ಕೆ ಸೈಂಧವ ಲವಣವನ್ನು ಸೇರಿಸಿ ಕಿವಿಗಳಿಗೆ ಬಿಡುವುದು.
15) ತುಲಸಿಯ ರಸವನ್ನು ಕಿವಿಯೊಳಗೆ ಹಾಕುವುದು.
16) ಕೋಳಿಮೊಟ್ಟೆಯ ಬಿಳಿ ಲೋಳೆಯನ್ನು ಕಿವಿಗೆ ಹಾಕುವುದು
17) ಬೇವಿನ ಎಲೆಗಳನ್ನು ಕುದಿಸಿ ಅದರ ಆವಿಯನ್ನು ಕಿವಿಗೆ ತಾಗುವಂತೆ ಹಿಡಿದರೆ ಕಿವಿನೋವು ಮಾಯವಾಗುವುದು.

ಸಂಗ್ರಹ : ಗೃಹ ಸಂಗಾತಿ.

---

ಅರೆಭಾಷೆ ಗೌಡರ ಬಗ್ಗೆ ಅಧ್ಯಯನ ಮಾಡಲು ಯುವಕರ ದಂಡೇ ಬರಲಿ



## ಪತ್ರ ವಿಭಾಗ :

ನಾನು ನಿಮ್ಮನ್ನು ನನ್ನಷ್ಟಕ್ಕೆ ಪರಿಚಯಿಸಿಕೊಳ್ಳುತ್ತಿದ್ದೇನೆ ಬಹಳ ದಿವಸಗಳ ನಂತರ ಕಾರಣ ಈಗ ಚೇತರಿಸಿದ್ದೇನೆ.

ಕೊಡಗು ಸಂಗಾತಿ ಸಂಚಿಕೆ 4ರಲ್ಲಿ ನೀವು ಬರೆದ ಸಂಪಾದಕೀಯ 1870ರ ಗೌಡ ಜನಾಂಗದ ಕಟ್ಟುಕಟ್ಟಲೆ ನೋಡಿ ಬಹಳ ಹಿಡಿಸಿತು, ಹಿರಿಯರನ್ನು ಸ್ಮರಿಸಬೇಕಾದದು ನಮ್ಮ ಕರ್ತವ್ಯ. ಚಿಗುರುಮೀಸೆಯ ಹುಡುಗರಿಗೊಂದು ಕಿವಿಮಾತು ಸಮಯಕ್ಕೆ ಸಠಿಯಾದುದು ಕೆಲವು ಟೀಕೆ ಟಿಪ್ಪಣಿಗಳು ಸಮಯೋಚಿತ. ಅಂತೂ ಕೊಡಗು ಸಂಗಾತಿಯ ಬೆಳವಣಿಗೆ ಹರ್ಷದಾಯಕ ಹಾಗೂ ಕಷ್ಟದಾಯಕ. ಯುವ ಜನಾಂಗ ಇದನ್ನರಿತು ಮುನ್ನುಗ್ಗಬೇಕು. ಯುವಜನಾಂಗ ಎಚ್ಚತ್ತರೆ ದೇಶ ಎಚ್ಚೆತ್ತೀತು.ಜನಾಂಗ ಉದ್ಧಾರವಾದೀತು.

ಚೇಂದ್ರಿಮಾಡ ಮುತ್ತಪ್ಪ.

### ದೇವದಾಸಿ ಪದ್ಧತಿ

ಡಿಸಂಬರ್ 26ರಂದು ಮಡಿಕೇರಿಯಲ್ಲಿ ನಡೆದ ಮುಖಾ-ಮುಖಿ ಕಾರ್ಯ ಕ್ರಮದಲ್ಲಿ ಕೆಲವು ಚರ್ಚೆಗಳು ನಡೆದವು .ಅದರಲ್ಲಿ ಟೀಕೆ ಟಿಪ್ಪಣಿಗಳನ್ನು ಬರೆಯ ಬಾರದು ಎಂದು ಚರ್ಚೆಗೆ ಒಳಗಾಗಿತ್ತು. ಆದರೆ ಜನವರಿ 1ರಿಂದ 15ರ ವರೆಗೆ ಪ್ರಕಟವಾದ ಪಾಕ್ಷಿಕ ಪತ್ರಿಕೆಯಲ್ಲಿ ಡಾ. ಪುರುಷೋತ್ತಮ ಬಿಳಿಮಲೆಯವರು, "ಗೌಡರ ಮದುವೆಯ ವಿಶ್ಲೇಷಣೆ" ಬಗ್ಗೆ ಬರೆದಿದ್ದರು. ಅಂಕ (5)ರ ವಾಕ್ಯವನ್ನು ಓದಿದಾಗ ಯಾವ ಹೆಣ್ಣಿಗಾದರು ಮನ ನೊಂದುಕೊಳ್ಳುವರು. ಇಂತಹ ಸಂಘಟನೇ ನಮ್ಮ "ಗೌಡ ಸಂಸ್ಕೃತಿಯಲ್ಲಿ ಇದೆಯಾ? ಇತರ ಹೊರ ರಾಜ್ಯಗಳಲ್ಲಿ ದೇವದಾಸಿ ಪದ್ಧತಿಯನ್ನು ನಾನು ಕೇಳಿದ್ದೇನೆ.

ಹೆಣ್ಣನ್ನು ವಿದ್ಯಾ ದೇವತೆಯೆಂತಲೂ, ಆದಿಶಕ್ತಿಯೆಂತಲೂ, ಭೂದೇವತೆಯೆಂತಲೂ, ಆದಿ ದೇವತೆಯೆಂತಲೂ, ಇನ್ನು ಹಲವಾರು ರೂಪಗಳಲ್ಲಿ ಹೆಣ್ಣನ್ನು ವರ್ಣಿಸುತ್ತಾರೆ. ಹೆಣ್ಣಿಗೆ ತಾಯಿಯ ಸ್ಥಾನವನ್ನು ಮದುವೆಯಾದ ಗಂಡನಿಂದ ಮಾತ್ರ ಸಾಧ್ಯ. " ದೇವದಾಸಿಯರ ಹಾಗೆ ನಮ್ಮ ಗೌಡ ಸಂಸ್ಕೃತಿಯಲ್ಲಿ ಅಡಗಿದ್ದ ಆದರೆ ಮದುವೆ ಎಂಬ ಪದಕ್ಕೆ ಅರ್ಥವಿಲ್ಲ. ಅದಕ್ಕೆ ಸಮಾಜದಲ್ಲಿ ಯಾವ ಸ್ಥಾನವನ್ನು ತುಂಬಬಹುದು ಎಂಬ ಭಯ. ಇಂತಹ ಪರಿಸ್ಥಿತಿಯಲ್ಲಿ ನಮ್ಮ ಕಟ್ಟುಪಾಡುಗಳ ಮತ್ತು ಸಂಸ್ಕೃತಿಗಳ ಬಗ್ಗೆ ಪ್ರೊ. ಪೂಜಾರಿ ಮೊಣಪ್ಪನವರು ಓದುಗರ ಮುಂದೆ ಅವರ ಅಭಿಪ್ರಾಯವನ್ನು ಇಟ್ಟಿದ್ದಾರೆ. ಅದು ತಪ್ಪಾಗಲಾರದು ಎಂದು ನನ್ನ ಅನಿಸಿಕೆ. ಇಂತಹ ವಾಕ್ಯಗಳ ಬಗ್ಗೆ ಓದುಗರ ಮುಂದೆ ಅವರ ಅಭಿಪ್ರಾಯವನ್ನು ತಿಳಿಯ ಪಡಿಸಿದಕ್ಕೆ ಪ್ರೊ. ಪೂಜಾರಿ ಮೊಣ್ಣಪ್ಪನವರಿಗೆ ನನ್ನ ಅನಂತ ಧನ್ಯವಾದಗಳು.

ಅಜಡ್ಕ ರಾಣಿ ಬಾಲಕೃಷ್ಣ.ಕುಶಾಲಗರ

ವಿ.ಸೂ.: ಟೀಕೆ ಟಿಪ್ಪಣಿ ಇಲ್ಲದೆ ಹೋದರೆ ಯಾವುದೆ ಸಂಸ್ಥೆ ಹೆಮ್ಮರವಾಗಿ ಬೆಳೆಯಲಾರದು.

15ನೇ ಪುಟದಿಂದ

ಬಾಗಿಲಿನ ಕಡೆ ತಿರುಗುವಾಗ ಮಂಚದ ಅಡಿಯಲ್ಲಿ ಏನೋ ಇರುವುದು ಕಂಡು ಬಂದಿತು!

ಕುತೂಹಲದಿಂದ ಹತ್ತಿರ ಬಂದು ಅಲ್ಲಿದ್ದ ವಸ್ತುವನ್ನು ಎತ್ತಿಕೊಂಡು ನೋಡಿದನು.

ರಮ್ ಸೀಸೆ ಮತ್ತು ಗ್ಲಾಸು!

ಬೆಚ್ಚಿ ಬಿದ್ದನು ಪ್ರಸನ್ನ!

ಬುದ್ದಿ ಭ್ರಮಣೆಯಾಗಿರೋ ಅಣ್ಣ ಈ ರೀತಿ ಕಳ್ಳತನದಲ್ಲಿ ಕುಡಿಯಲು ಸಾಧ್ಯವೆ?

ಸಮ್‌ಥಿಂಗ್ ಈಸ್ ರಾಂಗ್!

ಪ್ರಸನ್ನ ಮಂಚದ ಕಡೆ ನೋಡುತ್ತಿರುವಾಗಲೇ ಹೊರಳಾಟದಿಂದ ಜರುಗಿದ್ದ ದಿಂಬಿನ ಅಡಿಯಿಂದ ಕಪ್ಪಗೆ ಹೊಳೆಯುತ್ತಿದ್ದ ವಸ್ತು ಕಂಡು ಬಂದಿತು.

ಕಪ್ಪಗೆ ಹೊಳೆಯುತ್ತಿದ್ದ ಪಿಸ್ತೂಲು!

ಹುಚ್ಚನ ಹತ್ತಿರ ಪಿಸ್ತೂಲು!

ಮೈಗಾಡ್.....! ಇವರೆಲ್ಲಾ ಸೇರಿಕೊಂಡು ನನಗೆ ಒಂದು ಗತಿ ಕಾಣಿಸಲು ನಾಟಕ ಆಡುತ್ತಿದ್ದಾರೆ!

ಇವರ‍್ಯಾರು ಹುಚ್ಚರಲ್ಲ!

ಪ್ರಸನ್ನ ದುಡುಕಲಿಲ್ಲ, ಪಿಸ್ತೂಲನ್ನು ಮೊದಲಿನಂತೆ ದಿಂಬಿನ ಅಡಿಯಲ್ಲಿ ಇರಿಸಿ ಹೊರ ಬಂದನು.

ಹುಚ್ಚನಂತೆ ನಾಟಕ ಆಡುತ್ತಿರುವ ಅಣ್ಣ ಲಿಂಗಯ್ಯ ಅಪಾಯಕಾರಿ! ಅವನೇ ನನ್ನನ್ನು ಎರಡು ಸಲ ಸಾಯಿಸಲು ಪ್ರಯತ್ನಿಸಿದ್ದಾನೆ!?

(ಮುಂದುವರೆಯುತ್ತದೆ.)

### ಉನ್ನತ ವಿದ್ಯೆ ಮತ್ತು ಹುದ್ದೆಗೇರಿದ ನಮ್ಮ ಅರೆಭಾಷಿಕರು

**ಡಾ|| ಕಾವೇರಿಮನೆ ಎಂ. ಬೋಜಪ್ಪ**
ಬಿ.ಎಸ್ಸಿ. (Ag), ಎಂ.ಎಸ್ಸಿ. (Ag)ಪಿ.ಹೆಚ್.ಡಿ.(Rtd.)
ಪ್ರಿನ್ಸಿಪಾಲ್ ಮತ್ತು ಯೂನಿವರ್ಸಿಟಿ ಪ್ರೊಫೆಸರ್.
ಅಗ್ರಿಕಲ್ಚರಲ್ ಯೂನಿವರ್ಸಿಟಿ, ಕರ್ನಾಟಕ.

**ಡಾ|| ಗುಡ್ಡೇರ ಪೂವಯ್ಯ ಚಿನ್ನಯ್ಯ,**
ಬಿ.ವಿ.ಎಸ್ಸಿ, ಎಂ.ವಿ.ಎಸ್ಸಿ. ಪಿ.ಹೆಚ್.ಡಿ. (Rtd.)
ಹೆಡ್ ನ್ಯಾಷನಲ್ ಡೈರಿ ರಿಸರ್ಚ್ ಇನ್‌ಸ್ಟಿಟ್ಯೂಟ್ ಗೌವರ್ನಮೆಂಟ್ ಆಫ್ ಇಂಡಿಯಾ, ಬೆಂಗಳೂರು.1st ವಟರ್ನರಿ ಸರ್ಜನ್ ಮತ್ತು 1st ಪಿ.ಹೆಚ್‌ಡಿ (ವೆಟರ್ನರಿ ಸೈನ್ಸ್)

**ಮಿ. ಗುಂಡಪ್ಪ ನಾಗಪ್ಪ ಅಪ್ಪಯ್ಯ ಬಿ.ಎಸ್ಸಿ., (Ag.) (Rtd.),**
ಜಾಯಿಂಟ್ ಡೈರೆಕ್ಟರ್ ಗೌವರ್ನಮೆಂಟ್ ಆಫ್ ಕರ್ನಾಟಕ

**ಮಿ. ಗುಂಡಪ್ಪ ಪೂವಯ್ಯ ಮಣ್ಣಯ್ಯ, ಬಿ.ಇ. (Mech)**
ಅಡಿಷನಲ್ ಚೀಫ್ ಇಂಜಿನಿಯರ್ ಟಾಟಾ ಇಂಜಿನಿಯರ್ (TCE), ಬೆಂಗಳೂರು.

**ಮಿ. ಕೊಂಪುಳೀರ ಎಸ್. ಸೋಮಪ್ಪ (Rtd.)**
1st ಡೆಪ್ಯುಟಿ ಸುಪರಿಂಟೆಂಡೆಂಟಂ ಆಫ್ ಪೋಲೀಸ್ ಕುಶಾಲನಗರ.

ಅರೆಭಾಷೆ ಗೌಡರ ವಿಶಿಷ್ಟ ಸಂಪ್ರದಾಯ ಬೆಳಕಿಗೆ ಬರಲಿ — ಪಟ್ಟಡ ಪ್ರಭಾಕರ್

## STATEMENT ABOUT OWNERSHIP AND OTHER PARTICULARS ABOUT NEWS PAPER - KODAGU SANGATHI, FORTNIGHT MAGAZINE. FORM IV (SEE RULE- 8)

| | | | |
|---|---|---|---|
| 1. | Place of Publication | : | Msyore, Karnataka State |
| 2. | Periodicity of its publication | : | Fort Night |
| 3. | Printers Name | : | **Smt. Pattada P. Sheelamani** |
| | Weather citizen of India | : | Yes/Indian |
| | (If foreigners state the country of Origin) | : | NIA |
| | Address | : | 35, Savitha Nilaya, Ist Cross, 4th Block, Jayalaximipuram, Mysore - 12 |
| 4. | Publishers Name | : | **Smt. Pattada P. Sheelamani** |
| | Weather citizen of India | : | Yes/Indian |
| | (If foreigners state the country of Origin) | : | NIA |
| | Address | : | 35, Savitha Nilaya, Ist Cross, 4th Block, Jayalaximipuram, Mysore - 12 |
| 5. | Editors Name | : | **Smt. Pattada P. Sheelamani** |
| | Weather citizen of India | : | Yes/Indian |
| | (If foreigners state the country of Origin) | : | NIA |
| | Address | : | 35, Savitha Nilaya, Ist Cross, 4th Block, Jayalaximipuram, Mysore - 12 |
| 6. | Name and address of individuals who own the News Paper & Partners or Share Holders holding more than one percent of the Total Capital | : | **Smt. Pattada P. Sheelamani** Sole Proprietor, 35, Savitha Nilaya, Ist Cross, 4th Block, Jayalaximipuram, Mysore - 12 |

I, Smt. Pattada **P. Sheelmani** hereby declare that the particulars are given above are the to the best of my knowledge.

Sd/-
**Pattada Sheelamani**
Publisher

Place : Mysre
Date : 16-3-2000



ದ್ವಿತೀಯ ಸ್ಥಾನ ಪಡೆದ ಪೆರಾತ ತಂಡಕ್ಕೆ ಪ್ರಶಸ್ತಿಯನ್ನು ನೀಡುತ್ತಿರುವ ಕೊಡಗು ಸಂಗಾತಿಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರ್‌ನವರು, ಅಕಾಡೆಮಿ ಅಧ್ಯಕ್ಷರಾದ ತುಂತಜೆ ಗಣೇಶ್ ಹಾಗೂ ಕುಂಜಿಲನ ಸುರೇಶ್, ಪೆರಾತ ತಂಡದ ಕಡ್ಯದ ಸವಿ ಮತ್ತು ಬಾಳಾಡಿ ದಿನೇಶ್‌ಗೆ ಟ್ರೋಫಿನ ನೀಡುತ್ತಿರುವುದು



ಅತ್ಯುತ್ತಮ ಬ್ಯಾಟ್ಸ್‌ಮನ್
ಪಟ್ಟಡ ದೀಪಕ್ ಪ್ರಭಾಕರ್



ಅತ್ಯುತ್ತಮ ಬೌಲರ್
ಕಡ್ಯದ ಸವಿ



ಪಂದ್ಯ ಪುರುಷೋತ್ತಮ
ಮೊಟ್ಟನ ಮನು ಜೋಯಪ್ಪ



ಸರಣಿ ಶ್ರೇಷ್ಠ
ಮೊಟ್ಟನ ಅರುಣ್ ಜೋಯಪ್ಪ



ದಿನಾಂಕ 5-3-2000 ರಂದು ಚೆಟ್ಟಿಮಾನಿಯ ಕೆದಂಬಾಡಿ ಮನೆತನದ ಹಾಗೂ ಕೊಡಗ್ ಗೌಡ ಸಾಂಸ್ಕೃತಿಕ ಅಕಾಡೆಮಿಯ ಸಂಯುಕ್ತ ಆಶ್ರಯಲಿ ನಡೆದ ಕ್ರಿಕೆಟ್ ಪಂದ್ಯಾವಳಿಯನ್ನು ವೀಕ್ಷಿಸುತ್ತಿರುವ ಗೌಡ ಜನಾಂಗದ ಗಣ್ಯರು. ಎಡದಿಂದ ದಂಬೆಕೋಡಿ ಮಾದಪ್ಪ, ಪೊನ್ನೆಟಿ ಶಾಂತಿ ಪೊನ್ನಪ್ಪ, ಪಟ್ಟಡ ಪ್ರಭಾಕರ್, ತೋಟಂಬೈಲು ನಾಣಯ್ಯ, ಕುಯ್ಯಮುಡಿ ಪೂರ್ಣಯ್ಯ, ಕೋರನ ಪೂಣಚ್ಚ, ಬೇಕಲ್ ಜಯರಾಂ ಹಾಗೂ ತಡಿಯಪ್ಪನ ಕುಮಾರ ಜಯ ಹಾಗೂ ಇತರರನ್ನು ಕಾಣಬಹುದು.



ವಿಜೇತ ಚೇರಂಗಾಲ ತಂಡಕ್ಕೆ ಪ್ರಶಸ್ತಿ ನೀಡುತ್ತಿರುವ ಶ್ರೀತೋಟಂಬೈಲು ನಾಣಯ್ಯನವರು, ತುಂತಜೆ ಗಣೇಶ್, ಕುಂಜಿಲನ ಸುರೇಶ್, ಕೆದಂಬಾಡಿ ಕುಮಾರ್ ಹಾಗೂ ವಿಜೇತ ತಂಡದ ನಾಯಕ ಹೊಸೂರು ಸತೀಶ್, ಹೊಸೂರು ಗಣಿ, ಮ್ಯಾನೇಜರ್ ಮೊಟ್ಟನ ಅಮುಲ್ ದೇವಯ್ಯ ಇವರನ್ನು ಚಿತ್ರದಲ್ಲಿ ಕಾಣಬಹುದು.

---

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.